# ನೂತನ ಗೃಹ ಪ್ರವೇಶ



## ಶ್ರೀಮತ್ತಂತ್ರ ಸಾರೋಕ್ತ
## ವಾಸ್ತುಶಾಂತಿ ಪ್ರಯೋಗಃ






ಶ್ರೀನಿವಾಸ ಪ್ರಕಾಶನ
ಕಿತ್ತೂರ ಚನ್ನಮ್ಮಾ ರಾಣಿ ರಸ್ತೆ,
ಗದಗ-582 101.

ಬೆಲೆ : 20-00

॥ ಶ್ರೀ ॥

# ನೂತನ ಗೃಹಪ್ರವೇಶಃ

## ಶ್ರೀಮತ್ತಂತ್ರಸಾರೋಕ್ತ

# ವಾಸ್ತುಶಾಂತಿ ಪ್ರಯೋಗಃ

ಶ್ರೀ ಶಕೆ ೧೯೨೫ ಸುಭಾನುನಾಮ ಸಂವತ್ಸರ



**ಶ್ರೀನಿವಾಸ ಪ್ರಕಾಶನ**

ಕಿತ್ತೂರ ಚನ್ನಮ್ಮಾ ರಾಣಿ ರಸ್ತೆ, ಗದಗ.

ಪ್ರಕಾಶಕರು :

ಶ್ರೀನಿವಾಸ ಪ್ರಕಾಶನ
C/o ಶಿರಹಟ್ಟಿ ಪ್ರಿಂಟರ್ಸ
ಕಿತ್ತೂರ ಚನ್ನಮ್ಮಾ ರಾಣಿ ರಸ್ತೆ
ಗದಗ - ೫೮೨ ೧೦೧

ಎರಡನೇಯ ಮುದ್ರಣ ೧೦೦೦ ಪ್ರತಿಗಳು

---



---

ಬೆಲೆ : ೨೦-೦೦

ಮುದ್ರಕರು :

ಶಿರಹಟ್ಟಿ ಪ್ರಿಂಟರ್ಸ
ಕಿತ್ತೂರ ಚನ್ನಮ್ಮಾ ರಾಣಿ ರಸ್ತೆ
ಗದಗ - ೫೮೨ ೧೦೧

---

ಪೂಜ್ಯ ಗುರುಗಳಾದ ವೈ. ವಾ. ಶ್ರೀ ರಾಘವೇಂದ್ರಾಚಾರ್ಯ ಬುರ್ಲಿ ಇವರ ಸಂಗ್ರಹ.

ಇವರ ಸುಪುತ್ರರು ಹಾಗೂ ನಮ್ಮ ಪೂಜ್ಯ ಗುರುಗಳಾದ ಶ್ರೀಯುತ ಅನಂತಾಚಾರ್ಯ ಬುರ್ಲಿ, ರಾಯಚೂರ ಇವರ ಅನುಮತಿಯನ್ನು ಪಡೆದುಕೊಂಡು ಶ್ರೀನಿವಾಸ ಪ್ರಕಾಶನದಿಂದ ಪ್ರಕಟಿಸಲಾಗಿದೆ.

॥ ಶ್ರೀಮದನಂತೋ ವಿಜಯತೇ ತರಾಮ್ ॥

# ವಾಸ್ತುಶಾಂತಿ ಅನುಕ್ರಮಣಿಕೆ

***********

೧) ಸಂಕಲ್ಪ- ಶಾಂತಿಯನ್ನು ಪ್ರಾರಂಭಿಸುವ ಮೊದಲು ಯಜಮಾನನು ಮಂಗಲಸ್ನಾನ ಮಾಡಿ ನಿತ್ಯ ಕರ್ಮಾನುಷ್ಠಾನವನ್ನು ಮುಗಿಸಿಕೊಂಡು, ಆಸನದಲ್ಲಿ ಪೂರ್ವಾಭಿಮುಖವಾಗಿ ಪತ್ನೀ ಸಹಿತ ಕುಳಿತು, ಆಚಮನ ಪವಿತ್ರಧಾರಣ ಹಾಗೂ ಪ್ರಾಣಾಯಾಮ ಮಾಡಿ ದೇಶಕಾಲಗಳನ್ನು ಉಚ್ಚರಿಸಿ, ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ವಿಷ್ಣುಪ್ರೀತ್ಯರ್ಥವಾಗಿ ಈ ಗೃಹದಲ್ಲಿ ವಾಸಮಾಡುವ ಈ ನಮ್ಮ ಪರಿವಾರಕ್ಕೆ ಸುಖವಾಸ ಹಾಗೂ ಸಮಸ್ತ ಸಜ್ಜನರಾದ ಅತಿಥಿ ಅಭ್ಯಾಗತರಿಗೆ ಸುಖವಾಸ ಆಗುವದಕ್ಕಾಗಿ ಗ್ರಹಯಜ್ಞಪೂರ್ವಕ ತಂತ್ರಸಾರದಲ್ಲಿ ಉಕ್ತವಾದ ವಾಸ್ತು ಶಾಂತಿಯನ್ನು ಮಾಡುತ್ತೇನೆಂದು ಹೇಳುವದೇ ಸಂಕಲ್ಪವು ಎನಿಸುತ್ತದೆ.

೨) ಪುಣ್ಯಾಹಾದಿ ಮಧುಪರ್ಕಪೂಜನಾಂತಂ- ವಾಸ್ತುಶಾಂತಿಗೆ ಅಂಗಭೂತವಾದ ಪುಣ್ಯಾಹ, ಮಾತೃಕಾ, ನಾಂದೀಶ್ರಾದ್ಧ ಆಚಾರ್ಯ ಋತ್ವಿಗ್ವರಣವನ್ನು ಮಾಡುತ್ತೇನೆಂದು ಹೇಳಿ ಈ ಕಾರ್ಯಗಳನ್ನು ಮುಗಿಸಿ ಋತ್ವಿಜರಿಗೆ ಗಂಧ, ಅಕ್ಷತೆ, ವಸ್ತ್ರ ತಾಂಬೂಲ, ದಕ್ಷಿಣೆಗಳಿಂದ ಮಧುಪರ್ಕ ಪೂಜೆಯನ್ನು ಮಾಡಬೇಕು.

೩) ಆಚಾರ್ಯ ಕೃತ್ಯಂ- ಆಚಾರ್ಯನಾದವನು ಹೋಮ ಶಾಲೆಯಲ್ಲಿ ಆಚಾರ್ಯ ಕೆಲಸವನ್ನು ಮಾಡುತ್ತೇನೆ ಎಂದು ಸಂಕಲ್ಪಿಸಿ, ಯದತ್ರ ಸಂಸ್ಥಿತಂ ಭೂತಂ ಎಂಬ ಮಂತ್ರದಿಂದ ಶಾಂತಿ ಕಾರ್ಯದಲ್ಲಿ ಬಿಳಿ ಸಾಸಿವೆಗಳನ್ನು ಎಲ್ಲಕಡೆಗೆ ಚೆಲ್ಲಿ ಭೂತಪಿಶಾಚಿಗಳನ್ನು ಓಡಿಸಬೇಕು.

೪) ಪಂಚಗವ್ಯ ಪ್ರೋಕ್ಷಣಂ- ಆಮೇಲೆ ಪಂಚಗವ್ಯದಿಂದ ಶುಚೀವೋಹವ್ಯಾ.... ಪುನಂತು ಮಾಂದೇವ ಜನಾ.... ಏತೋನ್ವಿಂದ್ರಂ ಇತ್ಯಾದಿ ಮಂತ್ರಗಳಿಂದ ಗೃಹವನ್ನು ಪ್ರೋಕ್ಷಿಸಬೇಕು.

೫) ಪ್ರಾದೇಶಕರಣಂ ತಥಾ ಕುಂಡಕರಣಂ- ಅನಂತರದಲ್ಲಿ ಸ್ವಸ್ತ್ಯಯನಂ ತಾರ್ಕ್ಷ್ಯಂ ಎಂಬ ಮಂತ್ರದಿಂದ ಪ್ರಾದೇಶಕರಣವನ್ನು ಮಾಡಿಕೊಂಡು, ಶಾಂತಿ ಹೋಮಕ್ಕಾಗಿ ಯಜಮಾನನ ಹಸ್ತದಿಂದ ಒಂದು ಮೊಳ ಚತುರಸ್ರವಾಗಿಯೂ ಒಂದು ಮೊಳ ತಗ್ಗಾಗಿಯೂ ಇರುವ, ಮೇಲೆ ಭೂಮಿಯಿಂದ ನಾಲ್ಕು ಅಂಗುಲ

ವಿಸ್ತಾರವಾಗಿರುವ ಮೂರು ಮೇಖಲೇ (ಪಾವಟಣಿಗೆ)ಗಳನ್ನು ನಿರ್ಮಿಸಿ, ಪಶ್ಚಿಮ ಭಾಗದ ಮಧ್ಯದಲ್ಲಿ ಅಶ್ವತ್ಥ ಪತ್ರ (ಅಳ್ಳಿಯ ಎಲೆ) ದಂತೆ ಆಕೃತಿ ಮಾಡಬೇಕು

೬) **ಸ್ಥಂಡಿಲ ಕರಣಂ**- ಮೇಲೆ ಹೇಳಿದ ಕುಂಡ ಮಾಡಲಾಗದಿದ್ದಲ್ಲಿ ಚತುರಸ್ರ ಸ್ಥಂಡಿಲವನ್ನು ಹೋಮಾನುಗುಣವಾಗಿ ಹಾಕಬೇಕು.

೭) **ವಾಸ್ತುವೇದಿ ಕರಣಂ**- ಈ ಹೋಮಸ್ಥಂಡಿಲದ ಪೂರ್ವದಿಕ್ಕಿಗೆ ವಾಸ್ತುವೇದಿಯನ್ನು ರಚಿಸಿ, ಈಶಾನಾದಿ ಉಪದಿಕ್ಕುಗಳಲ್ಲಿ ಲೋಹಕೀಲ (ತಾರುಮಳೆ) ಗಳನ್ನು **ವಿಶಂತು ಭೂತಲೇನಾಗ** ಎಂಬುದಾಗಿ ಶ್ಲೋಕವನ್ನು ಹೇಳಿ ಬಡಿದು, ನಾಲ್ಕು ಮೂಲೆಗಳಲ್ಲಿ ವಿಷ್ಣು ನಿವೇದಿತ ಅನ್ನವನ್ನು **ಅಗ್ನಿಭ್ಯೋಪ್ಯಥ ಸರ್ಪೇಭ್ಯಃ** ಎಂಬ ಮಂತ್ರದಿಂದ ಬಲಿಗಳನ್ನು ಇಡಬೇಕು.

೮) **ರೇಖಾಕರಣಂ**- ಅನಂತರದಲ್ಲಿ ಸಮಚತುರಸ್ರವಾದ ವಾಸ್ತು ಪೀಠವನ್ನು ಇಟ್ಟು ಮೇಲೆ ವಸ್ತ್ರವನ್ನು ಹಾಸಿ. ಅದರ ಮೇಲೆ ಕುಂಕುಮದಿಂದ ಪಶ್ಚಿಮ ಪೂರ್ವ ಒಂಬತ್ತು ರೇಖೆಗಳನ್ನು ದಕ್ಷಿಣದಿಂದ ಪ್ರಾರಂಭಿಸಿ ಉತ್ತರಕ್ಕೆ ಮುಗಿಯುವಂತೆ ಕ್ರಮವಾಗಿ ಬರೆಯಬೇಕು. ಇದರಂತೆ ದಕ್ಷಿಣೋತ್ತರ ಒಂಬತ್ತು ರೇಖೆಗಳನ್ನು ಪಶ್ಚಿಮದಿಂದ ಪ್ರಾರಂಭಿಸಿ ಪೂರ್ವಕ್ಕೆ ಮುಗಿಸಬೇಕು. ಈ ರೇಖೆಗಳನ್ನು ರಚಿಸುವಾಗ ಒಂದೊಂದಕ್ಕೆ ಹರಿಣಾದಿ ಒಂಬತ್ತು ದೇವತೆಗಳನ್ನು ಕ್ರಮವಾಗಿ ಹೇಳಬೇಕು. ಈ ರೇಖೆಗಳಿಂದಾಗಿ ಆಗುವ ೬೪ ಮನೆಗಳಲ್ಲಿ ವಾಸ್ತುಪಟದ ಪ್ರಕಾರ ಬ್ರಹ್ಮಾದಿ ದೇವತೆಗಳನ್ನು ಸ್ಥಾಪನೆ ಮಾಡಬೇಕು.

೯) **ವಾಸ್ತುಪುರುಷ ಸ್ಥಾಪನ ಕ್ರಮ**- ಶಾಂತಿ ಪ್ರಧಾನ ದೇವತೆಯಾದ ವಾಸ್ತು ಪುರುಷನನ್ನು **ಮಹೀದ್ಯೌ** ಇತ್ಯಾದಿ ಮಂತ್ರಗಳಿಂದ ಕ್ರಮವಾಗಿ ಕಲಶ ಸ್ಥಾಪನೆ ಮಾಡಿ ಪೂರ್ಣ ಪಾತ್ರೆಯನ್ನಿಟ್ಟು, ಅದರಲ್ಲಿ ಅಷ್ಟದಲ ಪದ್ಮವನ್ನು ತೆಗೆದು, ಶಕ್ತ್ಯನುಸಾರವಾಗಿ ಮಾಡಿಸಿದ ಸುವರ್ಣ ಪ್ರತಿಮೆಯನ್ನು **ಓಂ ಅಗ್ನಿಸ್ಸಪ್ತಿಂ** ಎಂಬ ಸೂಕ್ತದಿಂದ ಪಂಚಗವ್ಯ, ನೀರಕ್ಷೀರಗಳಿಂದ ಶುದ್ಧೀಕರಿಸಿ, ಷೋಡಶೋಪಚಾರಗಳಿಂದ ಪೂಜಿಸಬೇಕು. **ಕಲಶಸ್ಯಮುಖೇ** ಇತ್ಯಾದಿ ಶ್ಲೋಕಗಳಿಂದ ಕಲಶ ಪ್ರಾರ್ಥನೆಯನ್ನು ಮಾಡಬೇಕು.

೧೦) **ಬ್ರಹ್ಮಾದಿ ದೇವತಾ ಪ್ರಾರ್ಥನಾ**- ತಂತ್ರಸಾರದಲ್ಲಿ ಹೇಳಿದ ಬ್ರಹ್ಮಾದಿ ದೇವತೆಗಳ ಧ್ಯಾನವನ್ನು **ಬ್ರಹ್ಮಾಚತುರ್ಮುಖೋ ರಕ್ತೋ** ಇತ್ಯಾದಿ ಶ್ಲೋಕಗಳಿಂದ ಮಾಡಬೇಕು.

೧೧) **ಶಾಂತಿ ಹೋಮ ಕಾರ್ಯ ಕರಣಂ-** ಆಚಾರ್ಯನಾದವನು ಹೋಮಕುಂಡದ ಪಶ್ಚಿಮಕ್ಕೆ ಕುಳಿತು ಅದ್ಯೇತ್ಯಾದಿ ಎಂದು ಹೇಳಿ ಶಾಂತ್ಯಂಗ ಭೂತವಾದ ಕುಂಡಸ್ಥಂಡಿಲ ಕಾರ್ಯಗಳನ್ನು ನಡೆಸುತ್ತೇನೆ ಎಂದು ಸಂಕಲ್ಪಿಸಿ ತದ್ಹೋಮಯಿನ ಎಂದು ಸ್ಥಾಲೀಪಾಕ ತಂತ್ರವನ್ನು ವಾಗ್ಯತೋಭವೇತ್ ವರೆಗೆ ಮಾಡಿ ಕುಂಡಸ್ಥಂಡಿಲಗಳಲ್ಲಿ ಸ್ವಾಹಾ, ಭಾರತೀ ಲಕ್ಷ್ಮೀ ಈ ದೇವತೆಗಳನ್ನು ಧ್ಯಾನ್ಯ ಮಾಡಿ ಆವಾಹಿಸಬೇಕು.

೧೨) **ಅಗ್ನಿಪ್ರತಿಷ್ಠಾಪನಂ-** ತತಸ್ತ್ವೈಜಸೇನಾಸಂಭವೇ ಎಂದು ಸ್ಥಾಲೀಪಾಕ ತಂತ್ರವನ್ನು ಆರಂಭಿಸಿ ಅಗ್ನಿ ಪ್ರತಿಷ್ಠಾಪನೇ ವಿನಿಯೋಗಃ ಎನ್ನುವವರೆಗೆ ಹೇಳಿ ಓಂ ಭೂರ್ಭುವಸ್ವರೋಮ್ ವಿಷ್ಣು ವೀರ್ಯಾತ್ಮಕ ವರದ ನಾಮಾನಂ ಅಗ್ನಿಂ ಎಂಬುದಾಗಿ ಅಗ್ನಿಯನ್ನು ಸ್ಥಾಪಿಸಬೇಕು. ಅಗ್ನಿಯನ್ನು ತಂದ ಪಾತ್ರೆಯಲ್ಲಿ ಅಕ್ಷತ ಜಲವನ್ನು ಹಾಕಿ, ಪ್ರೋಕ್ಷಿತವಾದ ಇಂಧನವನ್ನು ಚಂದನ ತುಲಸೀಕಾಷ್ಠ ಸುಗಂಧ ಧೂಪಗಳನ್ನು ಅಗ್ನಿಯಲ್ಲಿ ಹಾಕಬೇಕು.

೧೩) **ಗೃಹಸ್ಥಾಪನಂ- ಅದ್ಯೇತ್ಯಾದಿಪೂರ್ವೋಚ್ಚರಿತ-** ಎಂದು ಹೇಳಿ ಶಾಂತ್ಯಂಗವಾದ ನವಗ್ರಹಗಳ ಅಂತರ್ಯಾಮಿಯಾದ ಶಿಂಶುಮಾರ ಪ್ರೀತ್ಯರ್ಥವಾಗಿ ನವಗ್ರಹಗಳನ್ನು ಸ್ಥಾಪಿಸಿ ಪೂಜಿಸುತ್ತೇನೆ ಎಂದು ಸಂಕಲ್ಪಿಸಿ, ಅಗ್ನಿಯ ಈಶಾನ್ಯ ದಿಕ್ಕಿನಲ್ಲಿ ಪೀಠವನ್ನು ಹಾಕಿ ವಸ್ತ್ರದ ಮೇಲೆ ಗ್ರಹಮಂಡಲಗಳನ್ನು ಬರೆದು ಆಯಾ ಮಂಡಲಗಳಲ್ಲಿ ಆಯಾ ಗ್ರಹಗಳನ್ನು ಸ್ಥಾಪಿಸಿಬೇಕು. ಅವುಗಳ ಈಶಾನ್ಯಕ್ಕೆ ಕ್ರಮವಾಗಿ ಮಹಿದ್ಯೌರಿತ್ಯಾದಿ ಮಂತ್ರಗಳನ್ನು ಪಠಿಸಿ ಕಲಶವನ್ನು ಸ್ಥಾಪಿಸಿ, ಷೋಡಶೋಪಚಾರಗಳಿಂದ ಪೂಜಿಸಿ, ಕಲಶ ಪ್ರಾರ್ಥನೆ ಕಲಶಸ್ಯಮುಖೇ ಎಂದು ಮಾಡಬೇಕು.

೧೪) **ಅಗ್ನಿ ಪ್ರಜ್ವಲನಮ್-** ಪುನಃ ಅಗ್ನಿ ಸಮೀಪಕ್ಕೆ ಬಂದು ವೇಣು ಧಮನಿ (ಊದುಗೊಳವೆ) ಯಿಂದಲೇ ಅಗ್ನಿಯನ್ನು ಪ್ರಜ್ವಲಿಸಿ, ಅಗಂತರ್ಗತ ಪರುಶರಾಮನನ್ನು ದೇವಂ ನಾರಾಯಣನ್ನತ್ವಾ ಎಂದು ಧ್ಯಾನಿಸಬೇಕು.

೧೫) **ಷೋಡಶ ಸಂಸ್ಕಾರ ಸಿದ್ಧಿ- ಪೂರ್ವೋಚ್ಚರಿತ** ಎಂದು ದೇಶ ಕಾಲಗಳನ್ನುಚ್ಚರಿಸಿ ಶ್ರೀ ವಿಷ್ಣುಪ್ರೀತ್ಯರ್ಥವಾಗಿ ಅಗ್ನಿಗೆ ಷೋಡಶ ಸಂಸ್ಕಾರ ಸಿದ್ಧಿಯನ್ನು ವ್ಯಸ್ತಸಮಸ್ತವ್ಯಾಹೃತಿಗಳಿಂದ ಹದಿನಾರುಸಲ ಆಜ್ಯವನ್ನು ಹೋಮ ಮಾಡುತ್ತೇನೆ ಎಂದು ಸಂಕಲ್ಪಿಸಿ ಸ್ಥಾಲೀಪಾಕತಂತ್ರದಿಂದ ಆಜ್ಯವನ್ನು ಶುದ್ಧ ಮಾಡಿ ಸ್ರುವ ಸಂಸ್ಕಾರವನ್ನು ಕೂಡಮಾಡಿ, ಭೂರಾದಿ ದೇವತೆಗಳನ್ನು ವಾಸುದೇವಾದಿಕಾಃ ಎಂಬ ಶ್ಲೋಕಗಳಿಂದ ಧ್ಯಾನಿಸಬೇಕು.

೧೬) ವೈಷ್ಣವಸಿದ್ಧಿ ಹೋಮ- ಅಗ್ನಿಗೆ ವೈಷ್ಣವ ದೀಕ್ಷೆಗಾಗಿ ನಾರಾಯಣ ಮಂತ್ರವನ್ನು ಎಂಟುಸಲ, ಪುರುಷ ಸೂಕ್ತದಿಂದ ಹದಿನಾರು ಸಲ, ವಾಸುದೇವ ಮಂತ್ರದಿಂದ ಹನ್ನೆರಡು ಸಲ ವಿಷ್ಣುಮಂತ್ರದಿಂದ ಆರು ಸಲ, ಅಜ್ಯ ಹೋಮ ಮಾಡಬೇಕು.

೧೭) ಅಗ್ನೌಪೀಠಾವರಣ ಪೂಜಾ- ಸ್ಥಾಪಿತವಾದ ಅಗ್ನಿಯಲ್ಲಿ ಪೀಠಾವರಣ ಪೂಜೆಗಳನ್ನು ಮಾಡಲೇಬೇಕೆಂದು ತಂತ್ರಸಾರದಲ್ಲಿ ಹೇಳಿರುತ್ತದೆ. ಆದ್ದರಿಂದ ಸಂಕ್ಷೇಪದಿಂದಲಾದರೂ ಪರದೇವತಾಯೈ ಶ್ರೀ ಲಕ್ಷ್ಮೀ ನಾರಾಯಣಾಯ ನಮಃ ವಿಷ್ಣೋರಾಸನಭೂತಾಯ ದಿವ್ಯರತ್ನಮಯಾಯಚ ಪ್ರಧಾನ ಪುರುಷೇಶಾಯ ಮಹಾ ಪೀಠಾಯತೇ ನಮಃ ಪೀಠದೇವತಾಭ್ಯೋ ನಮಃ ಸರ್ವೋಪಚಾರಾರ್ಥೇ ಅಕ್ಷತಾನ್ ಸಮರ್ಪಯಾಮಿ ಎಂದು ಪೀಠ ಪೂಜೆ ಮಾಡಬೇಕು. ಅನಂತರ ಅಗ್ನಿಯಲ್ಲಿ ಪರಶುರಾಮನನ್ನು ಆವಾಹಿಸಿ, ಅರ್ಘ್ಯ ಪುಷ್ಪೋಪಚಾರದ ವರೆಗೆ ಪೂಜಿಸಿ, ಓಂ ಪರಮ ಪುರುಷಾಯ ನಮಃ ಎಂದು ಸರ್ವೋಪಚಾರಗಳಿಂದ ಅಕ್ಷತೆಗಳನ್ನು ಹಾಕಿ ಆವರಣ ಪೂಜೆಯನ್ನು ಮುಗಿಸಬೇಕು.

೧೮) ಅಗ್ನ್ಯಂತರ್ಗತ ಮುಖ್ಯ ಪ್ರಾಣಾಂತರ್ಗತ ಪರಶುರಾಮ ಧ್ಯಾನಮ್ - ಚತ್ವಾರಿಶೃಂಗಾ ಈ ಮಂತ್ರದಿಂದಲೂ ಸಪ್ತಹಸ್ತಶ್ಚತುಃ ಶೃಂಗಃ ಎಂಬ ಸ್ಮೃತಿ ಮಂತ್ರದಿಂದಲೂ ಅಗ್ನಿಧ್ಯಾನ ಮಾಡಿ, ತದಂರ್ಗತ ಉದ್ಯದ್ರವಿಪ್ರಕರ ಎಂಬ ಶ್ಲೋಕದಿಂದ ವಾಯುದೇವರನ್ನೂ, ಅಂಗಾರವರ್ಣ ಎಂಬ ಶ್ಲೋಕದಿಂದ ಪರಶುರಾಮ ದೇವರನ್ನೂ ಧ್ಯಾನಿಸಬೇಕು. ಆ ಮೇಲೆ ಏಷಹಿದೇವಃ ಎಂಬ ಮಂತ್ರದಿಂದ ಪರಶುರಾಮನನ್ನು ಸಮ್ಮುಖ ಮಾಡಿಕೊಂಡು, ನನಗೆ ವರಪ್ರದನಾಗಬೇಕು ಎಂದು ಪ್ರಾರ್ಥಿಸಬೇಕು.

೨೦) ಅನ್ವಾಧಾನಮ್ - ಎರಡು ಸಮಿತ್ತುಗಳನ್ನು ತೆಗೆದು ಬಲ ತೊಡೆಯ ಮೇಲೆ ಹಿಡಿದುಕೊಂಡು ಈ ವಾಸ್ತು ಶಾಂತಿಯಲ್ಲಿ ಆವಾಹಿತವಾದ ದೇವತೆಗಳಿಗೆ ಇಂಥಿಂಥ ಹವಿರ್ದ್ರವ್ಯಗಳಿಂದ ನಿಮ್ಮನ್ನು ತೃಪ್ತಿಪಡಿಸುತ್ತೇನೆಂದು ಹೇಳುವ ಕಾರ್ಯವೇ ಅನ್ವಾಧಾನವು. ಅಂದರೆ ಜಾತವೇದಾಗ್ನಿಯನ್ನು ಸಮಿತ್ತಿನಿಂದ, ಪ್ರಜಾಪತಿಯೆಂಬ ಆಘಾರ ದೇವತೆಗಳನ್ನು ಆಜ್ಯದಿಂದ, ಅಗ್ನಿಷೋಮ ಎಂಬೆರಡು ಚಕ್ಷುಷೀ ದೇವತೆಗಳನ್ನು ಆಜ್ಯದಿಂದ, ನವಗ್ರಹ ದೇವತೆಗಳನ್ನು ಅನ್ನ ತುಪ್ಪಗಳಿಂದ, ಅಧಿದೇವತೆ ಪ್ರತ್ಯಧಿದೇವತೆಗಳಿಗೆ ಇದೇ ದ್ರವ್ಯಗಳಿಂದ ಕಡಿಮೆ ಸಂಖ್ಯೆಯಲ್ಲೂ, ಬ್ರಹ್ಮಾದಿ ದೇವತೆಗಳನ್ನು ನಾಮ ಮಂತ್ರದಿಂದ ಸಮಿಧ, ಎಳ್ಳು, ಪಾಯಸ, ತುಪ್ಪಗಳಿಂದಲೂ ಉಕ್ತಸಂಖ್ಯೆಯಲ್ಲಿ

ಪ್ರಧಾನ ದೇವತೆಯಾದ ವಾಸ್ತು ಪುರುಷನನ್ನು ವಾಸ್ತೋಷ್ಪತೇ ಎಂಬ ನಾಲ್ಕು ಮಂತ್ರಗಳಿಂದ ಸಮಿಧ, ತಿಲ, ಪಾಯಸಾಜ್ಯಗಳಿಂದಲೂ ಹೋಮ ಮಾಡುತ್ತೇನೆಂದು ಹೇಳಬೇಕು. ನಂತರ ವಾಸ್ತೋಷ್ಪತೇ ನಾಲ್ಕು ಮಂತ್ರಗಳಿಂದಲೂ ಮತ್ತು ವಾಸ್ತೋಷ್ಪತೇ ಧ್ರುವಾಸ್ಥೂಣಾಂ ಎಂಬ ಐದನೆಯ ಮಂತ್ರದಿಂದಲೂ ಐದು ಬಿಲ್ವ ಫಲಗಳನ್ನು ಇಲ್ಲದೇ ಇದ್ದಲ್ಲಿ ಐದು ಬೀಜಗಳನ್ನಾದರೂ ಹೋಮ ಮಾಡುವೆನೆಂದು ಹೇಳಬೇಕು. ಸ್ವಿಷ್ಟಕೃದಗ್ನಿಯನ್ನು ಉಳಿದ ಶೇಷ ದ್ರವ್ಯಗಳಿಂದಲೂ, ರುದ್ರ ದೇವರನ್ನು ಇಧ್ಮ ಬಂಧನ ರಜ್ಜುವಿನಿಂದಲೂ ಹೋಮ ಮಾಡುವೆನೆಂದು ಸಂಕಲ್ಪಿಸಬೇಕು.

**ಸಮಿದ್ಹೋಮಃ-** ಅನ್ವಾಧಾನ ಮಾಡಿದ ಎರಡು ಸಮಿಧಗಳನ್ನು ಅಗ್ನಿಯಲ್ಲಿ ಹಾಕಬೇಕು ಆಮೇಲೆ ಸ್ಥಾಲೀಪಾಕ ತಂತ್ರವನ್ನು ಅಗ್ನ್ಯಾಯತನಾತ್ ಎಂದು ಆರಂಭಿಸಿ, ಆತ್ಮಾನಂಚಾಲಂಕೃತ್ಯದ ವರೆಗೆ ಮಾಡಿ ಸಂಸ್ಕೃತವಾದ ಆಜ್ಯ, ಇಧ್ಮ, ಚರುಹವಿರ್ದ್ರವ್ಯಾದಿಗಳನ್ನು ದೇವರಿಗೆ ಸಮರ್ಪಿಸಿ, ಇತರ ದೇವತೆಗಳಿಗೆ ಹೋಮ ಮಾಡಬೇಕು. ಸ್ಥಾಲೀಪಾಕ ತಂತ್ರವನ್ನು ಇಧ್ಮ ಬಂದನರಜ್ಜುಂ ಇಧ್ಮಸ್ಥಾನೇ ನಿಧಾಯ ಎಂದು ಆರಂಭಿಸಿ, ಆಜ್ಯಭಾಗದ ವರೆಗೆ ಮಾಡಬೇಕು.

**೨೧) ಪ್ರಧಾನ ಹೋಮಾದಿ-** ಗಣಪತ್ಯಂತರ್ಗತ ವಿಶ್ವನಾಮಕ ಪ್ರೀತ್ಯರ್ಥವಾಗಿ ವರಾಹುತಿಯನ್ನು ಗಣಾನಾಂತ್ವಾ ಎಂಬ ಮಂತ್ರದಿಂದ ಹೋಮ ಮಾಡಬೇಕು. ಬ್ರಹ್ಮಾದಿ ದೇವತೆಗಳನ್ನು ಬ್ರಹ್ಮಣೇಸ್ವಾಹಾ ಎಂದು ಎಲ್ಲ ದೇವತೆಗಳಿಗೂ ಕ್ರಮವಾಗಿ ಹೋಮ ಮಾಡಬೇಕು. ವಾಸ್ತು ಪುರುಷನನ್ನು ವಾಸ್ತೋಷ್ಪತೇ ಎಂಬ ನಾಲ್ಕು ಮಂತ್ರಗಳಿಂದ ಬಿಲ್ವಹೋಮಗಳನ್ನು ಶೇಷಹವಿಸ್ಸಿನಿಂದ ಸ್ವಿಷ್ಟಕೃತ ಹೋಮವನ್ನು ಮಾಡಬೇಕು.

**ಪ್ರಾಯಶ್ಚಿತ್ತ ಹೋಮ-** ಅಯಾಶ್ಚಾಗ್ನೇ ಇತ್ಯಾದಿ ಮಂತ್ರದಿಂದ ಪ್ರಾಯಶ್ಚಿತ್ತ ಹೋಮ ಮಾಡಬೇಕು.

**ಬಲಿದಾನಮ್-** ಅನಂತರ ನವಗ್ರಹಗಳಿಗೂ, ಲೋಕಪಾಲಕರಿಗೂ, ಕ್ಷೇತ್ರ ಪಾಲಕರಿಗೂ ಬಲಿದಾನವನ್ನು ಕೊಡಬೇಕು.

**ಪೂರ್ಣಾಹುತಿ-** ಶಾಂತಿ ಪೂರ್ತಿಗಾಗಿ ಧಾಮಂತೇ ಎಂಬ ಮಂತ್ರದಿಂದ ಅಥವಾ ಮೂರ್ಧಾನಂ ದಿವೋ ಎಂಬ ಮಂತ್ರದಿಂದ ಪೂರ್ಣಾಹುತಿ ಹೋಮವನ್ನು ಮಾಡಬೇಕು. ಆಮೇಲೆ ಸ್ಥಾಪಿತ ದೇವತೆಗಳನ್ನು ಪೂಜಿಸಬೇಕು.

೨೨) ಯಜಮಾನಾಭಿಷೇಕ- ಕಲಶೋದಕವನ್ನು ತೆಗೆದುಕೊಂಡು ಆಚಾರ್ಯರೇ ಮೊದಲಾದ ಋತ್ವಿಜರು ಸಮುದ್ರಜ್ಯೇಷ್ಠಾ ಇತ್ಯಾದಿ ಮಂತ್ರದಿಂದ ಸುರಾಸ್ತ್ವಾ ಇತ್ಯಾದಿ ಪೌರಾಣಿಕ ಮಂತ್ರಗಳಿಂದ ಸಪರಿವಾರ ಸಪತ್ನೀಕ ಯಜಮಾನನನ್ನು ಅಭಿಷೇಕ ಮಾಡಬೇಕು.

೨೩) ತ್ರಿಸೂತ್ರ್ಯಾ ಗೃಹವೇಷ್ಟನಮ್- ಯಜಮಾನನು ಆಚಾರ್ಯಋತ್ವಿಜರನ್ನು ಕೂಡಿಕೊಂಡು ತ್ರಿಗುಣಿತ ಸೂತ್ರವನ್ನು ಹಾಲಿನಲ್ಲಿ ಅದ್ದಿ ಪೂರ್ವದಿಂದ ಆರಂಭಿಸಿ ಶನ್ನ ಇಂದ್ರಾಗ್ನಿ, ರಾಕ್ಷೋಘ್ನ, ಪಾವಮಾನ ಮಂತ್ರಗಳಿಂದಲೂ ಗೃಹವೇಷ್ಟನ ಮಾಡಬೇಕು. ವೇಷ್ಟನ ಮಾಡಿದ ಸೂತ್ರವನ್ನು ಜಲಕ್ಷೀರಗಳಿಂದ ಬೇರೆ ಬೇರೆಯಾಗಿ ಸುರಿದು ತೊಯ್ಸಬೇಕು.

೨೪) ವಾಸ್ತು ಪುರುಷ ಸ್ಥಾಪನಮ್- ಮಧ್ಯದಲ್ಲಿರುವ ಬ್ರಹ್ಮಸ್ಥಾನದಲ್ಲಿ ಸ್ವರೂಪ ಸ್ತ್ರೀ ರೂಪಳಾದ ಪೃಥ್ವೀ ದೇವಿಯನ್ನು ಓಂ ಪೃಥಿವ್ಯೈ ನಮಃ ಎಂದು ಧ್ಯಾನಿಸಿ ಪೂಜಿಸಿ, ಸರ್ವದೇವಮಯಂ ವಾಸ್ತು ಎಂಬ ಶ್ಲೋಕವನ್ನು ಪಠಿಸಿ, ಗೃಹದ ಆಗ್ನೇಯ ಕೋಣಕ್ಕೆ ಯಜಮಾನ ಪದೇನ ಹಸ್ತ ಪ್ರಮಾಣವುಳ್ಳ ಗರ್ತವನ್ನು ತೆಗೆದು ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಿ ಶುಭ್ರ ಚಂದನ ಪುಷ್ಪಾಕ್ಷತೆಗಳನ್ನು ಚೆಲ್ಲಿ, ಸಪ್ತಧಾನ್ಯ ಬೀಜಗಳನ್ನು ದಧ್ಯಕ್ತ ಲಾಜಗಳನ್ನು ಶೈವಾಲವನ್ನು ಹಾಕಬೇಕು. ಅರ್ಚಿತವಾದ ನೂತನ ಜಲಪೂರ್ಣ ಕುಂಭವನ್ನು ಎರಡೂ ಕೈಗಳಿಂದ ತೆಗೆದುಕೊಂಡು ಎರಡೂ ಮೊಣಕಾಲುಗಳನ್ನು ನೆಲಕ್ಕೆ ಹಚ್ಚಿ ಓಂ ನಮೋ ವರುಣಾಯ ಎಂಬ ಮಂತ್ರದಿಂದ ಅದೇ ಪೂರ್ಣ ಕುಂಭ ಜಲವನ್ನು ಗರ್ತದಲ್ಲಿ ಸುರಿದು ಶುಕ್ಲ ಪುಷ್ಪಾಕ್ಷತೆಗಳನ್ನು ಹಾಕಬೇಕು. ಆಮೇಲೆ ಮೃತ್ಪೇಟಿಕೆಯಲ್ಲಿ ಸಪ್ತಧಾನ್ಯ ದಧ್ಯೋದನ, ಶೈವಾಲ, ಫಲಪುಷ್ಪ ಆಕ್ಷತೆಗಳನ್ನು ಹಾಕಿ ಪೂಜಿತವಾದ ವಾಸ್ತು ಪುರುಷ ಪ್ರತಿಮೆಯನ್ನು ಅದರಲ್ಲಿ ಇಟ್ಟು ಪುನಃ ಪೂಜಿಸಿ ಪೂಜಿತೋಸಿ ಮಯಾ ವಾಸ್ತೋ ಎಂಬ ಶ್ಲೋಕದಿಂದ ಪ್ರಾರ್ಥಿಸಬೇಕು. (ವಾಸ್ತು ಪುರುಷನೇ, ಹೋಮ ಹವನಾದಿಗಳಿಂದ ನೀನು ಪೂಜಿತನಾಗಿರುವೆ. ನಮಗೆ ಗೃಹಸೌಖ್ಯವನ್ನು ಕೊಟ್ಟು ರಕ್ಷಿಸು. ಮತ್ತು ಭೂಶಯ್ಯೆಯಲ್ಲಿ ಅಭಿರತನಾದ ನೀನು ನಮಗೆ ಧನ ಧಾನ್ಯಾದಿಗಳಿಂದಲೂ ಗೃಹವನ್ನು ಸಮೃದ್ಧಿಯಾಗಿ ಮಾಡು ಎಂಬುದೇ ಮೇಲಿನ ಶ್ಲೋಕದ ತಾತ್ಪರ್ಯ) ಮತ್ತೆ ಆ ಗರ್ತ (ತೆಗ್ಗು) ದಲ್ಲಿ ವಾಸ್ತು ಪುರುಷ ಸಹಿತ ಮೃತ್ಪೇಟಿಕೆಯನ್ನು ಮೆಲ್ಲಗೆ ಇಟ್ಟು ಪುನಃ ಪೃಥ್ವೀದೇವಿಯು ತನ್ನ ಶಿರಸ್ಸಿನಲ್ಲಿ ಗಿರಿಪರ್ವತಗಳನ್ನೂ, ಸಾಗರಗಳನ್ನೂ ಹೇಗೆ ಧರಿಸುವಳೋ ಹಾಗೆ. ಭೂಶಯ್ಯಾರತನಾದ ನೀನು ಸಂತತಿ, ಸಂಪತ್ತುಗಳನ್ನು ಕೊಡುವವನಾಗು, ಎಂದು ಪ್ರಾರ್ಥಿಸಿ ಗರ್ತವನ್ನು ಮಣ್ಣಿನಿಂದ ತುಂಬಬೇಕು. ಮೇಲೆ

ಗೋಮಯದಿಂದ ಸಾರಿಸಿ, ರಂಗವಲ್ಯಾದಿಗಳಿಂದ ಅಲಂಕರಿಸಬೇಕು. (ಗರ್ತವು ತುಂಬಿ ಮಣ್ಣು ಹೆಚ್ಚಾಗಿ ಉಳಿದರೆ ಶುಭ ಉತ್ಕರ್ಷವೆಂತಲೂ, ಸಮನಾದರೆ ಮಧ್ಯಮವೆಂತಲೂ, ಕಡಿಮೆ ಬಿದ್ದರೆ ಅಧಮವೆಂತಲೂ ಫಲವನ್ನು ಹೇಳುತ್ತಾರೆ.) ಗರ್ತತೋಡಿ ವಾಸ್ತು ಪ್ರತಿಮಾ ಸ್ಥಾಪನ ಮಾಡಲು ಶಕ್ಯವಿಲ್ಲದಿದ್ದಲ್ಲಿ ಆ ಪ್ರತಿಮೆಯನ್ನು ಪೂಜಿಸಿ ಬ್ರಾಹ್ಮಣರಿಗೆ ದಾನಕೊಡಬೇಕೆಂದು ಪರಿಶಿಷ್ಟಕಾರರು ಹೇಳಿದ್ದಾರೆ.

ಲಕ್ಷ್ಮೀಪೂಜನಂ- ಈ ಲಕ್ಷ್ಮೀಪೂಜೆಯು ವಿಶೇಷವಾಗಿ ಹೇಳದೆ ಇದ್ದರೂ ಪರಂಪರೆಯಿಂದ ಬಂದ ರೂಢಿಯಾಗಿದೆ. ಆದ್ದರಿಂದ ಲಕ್ಷ್ಮೀ ಪೂಜೆಯನ್ನು ಆವಾಹನ ಸ್ಥಾಪನ, ಉಪಚಾರಗಳಿಂದ ಪೂಜಿಸಿ ಲಕ್ಷ್ಮೀಯನ್ನು ಪ್ರಾರ್ಥಿಸಿಕೊಳ್ಳಬೇಕು. ಈ ವಿಷಯದಲ್ಲಿ ಪ್ರಯೋಗ ಪಾರಿಜಾತಕಾರರು ಮಾತ್ರ ಲಕ್ಷ್ಮೀ ಪೂಜೆಯನ್ನು ಹೇಳಿದ್ದಾರೆ.

ಆಚಾರ್ಯ ಋತ್ವಿಕ್ ಪೂಜನಮ್ ದಕ್ಷಿಣಾದಾನಂ ಚ- ಆಚಾರ್ಯರನ್ನು ಪೂಜಿಸಿ ವಸ್ತ್ರ ಗೋದಾನ. ದ್ವಿಗುಣ ದಕ್ಷಿಣೆಗಳನ್ನು ಕೊಟ್ಟು ಇತರ ಋತ್ವಿಜರಿಗೆ ಶಕ್ತ್ಯನುಸಾರವಾಗಿ ದಕ್ಷಿಣಾದಾನ ಮಾಡಬೇಕು.

ಶ್ರೇಯೋ ದಾನಮ್ ಶ್ರೇಯೋ ಗ್ರಹಣಮ್- ಈ ಹೋಮದ ಶ್ರೇಯವನ್ನು ಆಚಾರ್ಯನಾದವನು ಯಜಮಾನನಿಗೆ ದಾನ ಮಾಡಬೇಕು ಹಾಗೂ ಯಜಮಾನನು ಅದನ್ನು ಸ್ವೀಕರಿಸಬೇಕು.

ದೇವತಾನಾಮ್ ಉತ್ತರ ಪೂಜನಮ್- ಶಾಂತಿಯಲ್ಲಿ ಸ್ಥಾಪಿತವಾದ ದೇವತೆಗಳಿಗೆ ಉತ್ತರ ಪೂಜೆಯನ್ನು ಉತ್ತಿಷ್ಠ ಬ್ರಹ್ಮಣಸ್ಪತೇ ಎಂಬ ಮಂತ್ರದಿಂದ ಮತ್ತು ಯಾಂತು ದೇವಗಣಾ ಎಂಬ ಶ್ಲೋಕದಿಂದಲೂ ಮಾಡಬೇಕು.

೨೫) ವಿಭೂತಿ ಗ್ರಹಣಂ- ಯಜಮಾನನು ಹೋಮ ಭಸ್ಮವನ್ನು ಗ್ರಹಣ ಮಾಡಿ ಮಾನಸ್ತೋಕೆ ಇತ್ಯಾದಿ ಮಂತ್ರಗಳಿಂದ ಅಥವಾ ಸರ್ವಮಸ್ತು ಶತಾಯುಷಂ ಎಂಬ ಮಂತ್ರದಿಂದ ಶಿರಸ್ಸಿನಲ್ಲಿ ಧರಿಸಬೇಕು. ಕೆಲವು ಶಿಷ್ಟ ಸಂಪ್ರದಾಯಕರು ಭಸ್ಮವನ್ನು ಧರಿಸುವುದಿಲ್ಲ. ಅವರವರ ಸಂಪ್ರದಾಯವಂತೆ ಮಾಡಬೇಕು.

೨೬) ಅಗ್ನಿ ವಿಸರ್ಜನಂ- ಗಚ್ಛ ಗಚ್ಛ ಸುರಶ್ರೇಷ್ಠ ಎಂಬ ಶ್ಲೋಕದ ಪ್ರಕಾರ ಸ್ಥಾಪಿತವಾದ ಅಗ್ನಿಯನ್ನು ವಿಸರ್ಜಿಸಬೇಕು.

೨೭) ವಿಷ್ಣ್ವರ್ಪಣಮ್- ಯಸ್ಯಸ್ಮೃತ್ಯಾ ಎಂಬ ಕೊನೆಯ ಮಂತ್ರದಿಂದ ನ್ಯೂನಾತಿರಿಕ್ತವಾದ ಹೋಮ ಕರ್ಮವನ್ನು ಶ್ರೀ ವಿಷ್ಣುವಿನಲ್ಲಿ ಸಮರ್ಪಣೆ ಮಾಡಿ,

ನೆರವೇರಿಸಿದ ಕರ್ಮದ ಫಲವನ್ನು ಪೂರ್ತಿಗೊಳಿಸಬೇಕು ಎಂಬುದಾಗಿ ಪ್ರಾರ್ಥಿಸಬೇಕು. ಅನಂತರ ಯಜಮಾನನು ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ಮಾಡಿ, ದಕ್ಷಿಣದಾನಾದಿಗಳನ್ನು ಕೊಟ್ಟು ಅವರಿಂದ ಆಶೀರ್ವಾದ ಪಡೆಯಬೇಕು. ಮತ್ತು ಬ್ರಾಹ್ಮಣರಿಂದ ಶಿವಂವಾಸ್ತು ಎಂಬುದಾಗಿ ಮೂರಾವರ್ತಿ ಉಚ್ಚಧ್ವನಿಯಿಂದ ಹೇಳಿಸಿಕೊಳ್ಳಬೇಕು. ಅನಂತರ ಬಂಧು-ಬಾಂಧವ ಸಮೇತನಾಗಿ ತಾನು ಭೋಜನಾದಿಗಳನ್ನು ಮಾಡಬೇಕು.

೨೮) ಗೃಹಪ್ರವೇಶವಿಧಿ- ವಾಸ್ತುಶಾಂತಿಯನ್ನು ಮಾಡಿ, ನಂತರ ಮರುದಿನ ಸುಮುಹೂರ್ತದಲ್ಲಿ ಗೃಹಪ್ರವೇಶವನ್ನು ಮಾಡಬೇಕು. ಮರುದಿನ ಮುಹೂರ್ತ ಇಲ್ಲದಿದ್ದಲ್ಲಿ ವಾಸ್ತುಶಾಂತಿ ದಿನವೇ ಗೃಹಪ್ರವೇಶ ವಿಧಿಯನ್ನು ಮುಗಿಸಬಹುದು. ಶಾಂತಿಯನ್ನು ಮಾಡುವುದಕ್ಕಾಗಿ ಪ್ರವೇಶ ಮಾಡುವಾಗ್ಗೆ ಹೊಸ ಕುಂಭವನ್ನು ಜಲದಿಂದ ತುಂಬಿ. ಅದರಲ್ಲಿ ಮಾವಿನ ತಳಿರು ಕರಿಕೆ, ಗಂಧ, ಪುಷ್ಪ, ಅಕ್ಷತೆ, ಫಲಗಳನ್ನು ಹಾಕಿ ವಸ್ತ್ರವನ್ನು ಹೊದಿಸಿ ಮೇಲೆ ತೆಂಗಿನಕಾಯಿಯನ್ನು ಇಟ್ಟು ಆ ಕುಂಭವನ್ನು ಯಜಮಾನನ ಪತ್ನಿಯು ತೆಗೆದುಕೊಂಡು ಹೊರಡಬೇಕು. ಯಜಮಾನನು ಕೂಡ ಬ್ರಾಹ್ಮಣ ಬಂಧು-ಬಾಂಧವರಿಂದ ಸಹಿತನಾಗಿ ವೇದಘೋಷ, ಮಂಗಲಗಳೊಂದಿಗೆ ಶುಭಶಕುನ ಸಮೇತ ದೇವರನ್ನು ಆಕಳವನ್ನು ಕೂಡಿಕೊಂಡು ನೂತನ ಗೃಹವನ್ನು ಪ್ರವೇಶಿಸಬೇಕು. ಪ್ರಧಾನಗೃಹದಲ್ಲಿ ಧಾನ್ಯರಾಶಿಯ ಮೇಲೆ ಕಲಶವನ್ನು ಇಟ್ಟು ಗೃಹಸೌಖ್ಯರ್ಯದ ಸಲುವಾಗಿ ಬ್ರಾಹ್ಮಣರಿಂದ ಪುಣ್ಯಾಹಂ ಸ್ವಸ್ತಿ ಇತ್ಯಾದಿ ವಾಕ್ಯಗಳನ್ನು ಮೂರಾವರ್ತಿ ಹೇಳಿಸಿಕೊಳ್ಳಬೇಕು. ನಂತರ ಬ್ರಾಹ್ಮಣರನ್ನು ಪೂಜಿಸಿ ಅವರಿಂದ ಶಿವಂವಾಸ್ತು ಎಂದು ಮೂರಾವರ್ತಿ ಹೇಳಿಸಿಕೊಂಡು ಆಶೀರ್ವಾದ ಪಡೆದು ಬ್ರಾಹ್ಮಣರ ಭೋಜನಾದಿಗಳನ್ನು ಮುಗಿಸಿ ತಾನೂ ಭೋಜನ ಮಾಡಬೇಕು.

- ಸಂಪೂರ್ಣಂ-

## ಶ್ರೀಮತ್ತಂತ್ರಸಾರಾನುಸಾರಿಣೀ

# ವಾಸ್ತು ಪದ್ಧತಿಃ

## ಮಂಗಲಾಚರಣಮ್

ಶ್ರೀಕಾಂತಮೇಕಾಂತಿಕ ಭಕ್ತಭಾಗ್ಯ
ಮನಂತ ನಾಮಾನಮನಂತಶಯ್ಯಮ್ ॥
ನಮಾಮ್ಯನಂತಂ ಗುಣದೇಶಕಾಲೈ
ರನಂತ ಸೌಖ್ಯಪ್ರದಮಿಷ್ಟದೈವಮ್ ॥೧॥

ಯೋ ಬ್ರಹ್ಮಚರ್ಯಾಸ್ಯ ಗೃಹಸ್ಥಯಾತಾಃ
ತಥಾವ್ರತಿತ್ವಸ್ಯ ನಿದರ್ಶನಾರ್ಥಮ್ ॥
ವಕ್ಷ್ಯೇ ಹನೂಮದ್ವರ ಭೀಮಮಧ್ವ
ರೂಪಾಣಿ ದಿವ್ಯಾನಿ ಸವಾಯುರವ್ಯಾತ್ ॥೨॥

ವೈದುಷ್ಯೌದಾರ್ಯ ವೈರಾಗ್ಯೈರ್ನಾನ್ಯ ಸಾಧಾರಣೈರ್ಗುಣೈಃ
ದಿಗಂತ ವಿಶ್ರುತಾನ್ವಂದೇ ಸತ್ಯಧ್ಯಾನ ಮುನೀಶ್ವರಾನ್ ॥೩॥
ಯಜ್ಞ ವಿಜ್ಞಾನ ವಿಖ್ಯಾತಾನ್ವೇದಾಬ್ಧೇ ಪಾರನೈಪುಣಃ
ವಾಸುದೇವಾಭಿದಾನ್ನೌಮಿ ವಾಸುದೇವರತಾನ್ವಿತಾನ್ ॥೪॥

ಶ್ರೀಮದನಂತೋ ವಿಜಯತೇತರಾಮ್ ಶ್ರೀರಸ್ತು

# ಶ್ರೀಮತ್ತಂತ್ರ ಸಾರಾನುಸಾರಿಣೀ

# ವಾಸ್ತುಪದ್ಧತಿಃ

ಲಕ್ಷ್ಮೀಪತಿಂ ಸರ್ವಗುಣೈಃ ಸುಪೂರ್ಣಂ ದೋಷಾತಿಗಂ ಸರ್ವ ಸುಕರ್ಮ ಪೂಜ್ಯಂ।
ನತ್ವಾಽಥ ವಾಯುಂ ಜಗತಾಂ ಪರಂ ಗುರುಂ ವಾಸ್ತುಪ್ರಯೋಗಂ ರಚಯಾಮಿ ಸನ್ಮುದೇ॥

ಹರಿಃ ಓಂ

## ಋಗ್ವೇದೀಯ ವಾಸ್ತುಶಾಂತಿ ಪ್ರಯೋಗ ಪ್ರಾರಂಭ :

### ಅಥ ಸಂಕಲ್ಪಃ

೧) ಸುಸ್ನಾತಃ ಕೃತನಿತ್ಯಕ್ರಿಯಃ ಸಪತ್ನೀಕಃ ಶುಚಿಃ ಪ್ರಾಙ್ಮುಖೋ ಯಜಮಾನಃ ದರ್ಭೇಷ್ವಾಸೀನಃ ಆಚಮ್ಯ, ಪವಿತ್ರಪಾಣಿಃ ಪ್ರಾಣಾನಾಯಮ್ಯ ಶ್ರೀ ಹರಿವಾಯು ಸ್ಮರಣಪೂರ್ವಕಂ ಸುಮುಖಶ್ಚೇತ್ಯಾದಿ........ದೇಶಕಾಲೌ ಸಂಕೀರ್ತ್ಯ, ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ವಿಷ್ಣು ಪ್ರೇರಣಯಾ ಶ್ರೀ ವಿಷ್ಣು ಪ್ರೀತ್ಯರ್ಥಂ.

ಅಸ್ಮಾಕಂ ಸಕುಟುಂಬಾನಾಂ ಇತ್ಯಾದಿ ಅಸ್ಮಿನ್ ವಾಸ್ತೌಮಮ ಸಪರಿವಾರಸ್ಯ ಚಿರಕಾಲ ಸುಖನಿವಾಸ ಸಿದ್ಧಿ ಪೂರ್ವಕಂ ತಥಾ ಸರ್ವೇಷಾಂ ಸಜ್ಜನಾನಾಂ ಸುಖಾವಾಸ ಸಿದ್ಧ್ಯರ್ಥಂ ಸಗ್ರಹಮಖಾಂ ತಂತ್ರಸಾರೋಕ್ತಾಂ ವಾಸ್ತುಶಾಂತಿಂ ಕರಿಷ್ಯೇ ಇತಿ ಸಂಕಲ್ಪ್ಯ।

### ಪುಣ್ಯಾಹಾದಿ ಮಧುಪರ್ಕ ಪೂಜನಾಂತಮ್

೨) ತದಂಗಭೂತಂ ಗಣಪತಿಪೂಜನಂ ಸ್ವಸ್ತಿಪುಣ್ಯಾಹವಾಚನಂ ಮಾತೃಕಾ ಪೂಜನಂ ನಾಂದೀಶ್ರಾದ್ಧಂ ಆಚಾರ್ಯಾದಿ ಋತ್ವಿಗ್ವರಣಂ ಚ ಕರಿಷ್ಯೇ ಇತಿ ಸಂಕಲ್ಪ್ಯ।

ತಾನಿ ಕೃತ್ವಾ ಯಥಾ ವಿಭವಂ ಗಂಧಪುಷ್ಪಾಕ್ಷತ ವಸ್ತ್ರಾಲಂಕಾರಾದಿಭಿಃ ಮಧುಪರ್ಕಾದಿನಾ ಋತ್ವಿಜಾನ್ ಪೂಜಯೇತ್।

## ಆಚಾರ್ಯಕೃತ್ಯಂ

೩) ತತಃಯಜನ ದೇಶೀ ಆಚಾರ್ಯಕರ್ಮ ಕರಿಷ್ಯೇ ಇತಿ ಸಂಕಲ್ಪ್ಯ ಗೌರ ಸರ್ಷಪಾನ್ ವಿಕಿರೇತ್ ಏಭಿರ್ಮಂತ್ರೈಃ । ಯದತ್ರ ಸಂಸ್ಥಿತಂಭೂತಂ ಸ್ಥಾನಮಾಶ್ರಿತ್ಯ ಸರ್ವತಃ । ಸ್ಥಾನಂ ತ್ಯಕ್ತ್ವಾತು ತತ್ಸರ್ವಂ ಯತ್ರಸ್ಥಂ ತತ್ರ ಗಚ್ಛತು । ಅಪಕ್ರಾಮಂತು ಭೂತಾನಿ........ಪೌಷ್ಟಿಕರ್ಮ ಸಮಾರಭೇ ।

## ಗೌರಸರ್ಷಪ ವಿಕಿರಣಂ ಪಂಚಗವ್ಯ ಪ್ರೋಕ್ಷಣಂ ಚ

೪) ಭೂತಪ್ರೇತ ಪಿಶಾಚಾದ್ಯಾ ಅಪಕ್ರಾಮಂತು ರಾಕ್ಷಸಾಃ । ಸ್ಥಾನಾದಸ್ಮಾದ್ವ್ರಜಂತ್ವನ್ಯತ್ ಸ್ವೀಕರೋಮಿ ಭುವಂತ್ವಿಮಾಂ । ಇತ್ಯನೇನ ಗೌರ ಸರ್ಷಪಾನ್ ವಿಕೀರ್ಯ । ಪಂಚಗವ್ಯೇನ ಶುಚಿಪೋಹವ್ಯಾ ಇತಿ ತೃಚೇನ ಪುನಂತು ಮಾದೇವಜನಾ ಇತಿ ತೃಚೇನ ಗೃಹಮಾಬಿಭೀತ । ಏತೋಽನ್ವಿಂದ್ರಮಿತಿ ತೃಚೇನ ಸರ್ವಗೃಹಂ ಸಂಪ್ರೋಕ್ಷ್ಯ ।

## ಪ್ರಾದೇಶಕರಣಂ ಕುಂಡಕರಣಂ ಚ

೫) ಸ್ವಸ್ತ್ಯಯನಮಿತ್ಯಾದಿ - ಪ್ರಾದೇಶ ಕರಣಾಂತಂ ಕುರ್ಯಾತ್ । ಪ್ರಧಾನ ಗಹಮಧ್ಯೇ ಯಜಮಾನೈಕ ಹಸ್ತಮಿತಂ ಚತುರಸ್ರಂ ಸಯೋನಿಂ। ತ್ರಿಮೇಖಲಂ ಕುಂಡಂ ಚತುರಂಗುಲೋತ್ಸೇಧಂ ಸ್ಥಂಡಿಲಂ ವಾ ವಿದಾಯ ।

## ಸ್ಥಂಡಿಲ ಕರಣಾದಿ

೬) ತತ್ಪೂರ್ವತಃ ಚತುರ್ರಂಗುಲೋನ್ನತಂ ಹಸ್ತಮಿತಂ ಸ್ಥಂಡಿಲಂ ಕೃತ್ವಾ ತಸ್ಯ ಐಶಾನ್ಯಾದಿ ಕೋಣ ಚತುಷ್ಟಯೇ ಚತುರೋ ಲೋಹಕೀಲಾನಾರೋಪಯೇತ್ । ತತ್ರ ಮಂತ್ರ ।

ವಿಶಂತು ಭೂತಲೇ ನಾಗಲೋಕಪಾಲಾಶ್ಚ ಸರ್ವತಃ। ಅಸ್ಮಿನ್ ಗೃಹೇಽವ ತಿಷ್ಠಂತು ಆಯುರ್ಬಲಕರಾಃ ಸದಾ ಇತಿ ಮಂತ್ರೇಣ ನಿಖನೇತ್ । ಪ್ರತಿ ಕೀಲಂ ಮಂತ್ರಾವೃತ್ತಿಃ।

ತತ ಐಶಾನಕೋಣಾದಿ ಕ್ರಮೇಣ ಚತುರ್ಷು ಕೋಣೇಷು । ಅಗ್ನಿಭ್ಯೋಽಪ್ಯಥ ಸರ್ಪೇಭ್ಯೋ ಯೇ ಚಾನ್ಯೇ ತತ್ಸಮಾಶ್ರಿತಾಃ । ತೇಭ್ಯೋ ಬಲಿಂ ಪ್ರಯಚ್ಛಾಮಿ ಪುಣ್ಯಮೋದನಮುತ್ತಮಮ್ । ಇತಿ ಮಂತ್ರಾವೃತ್ತ್ಯಾ, ವಿಷ್ಣೋರ್ನಿವೇದಿತಾನ್ನೇನ ಸದೀಪಮಾಷ ಭಕ್ತ ಬಲೀನ್‌ದತ್ವಾ।

## ವಾಸ್ತು ವೇದಿಕರಣಂ ರೇಖಾಕರಣಂ ಚ

೭) ಆದೌ ಸಮಚತುರಸ್ರಂ ವಾಸ್ತು ನಾಮಕ ಪೀಠಂ ಕೃತ್ವಾ ತದುಪರಿ

ಗೋಪಿಚಂದನ ಗೈರಿಕ ಕುಂಕುಮಾದಿನಾ ಹೈಮ್ಯರೂಪ ಶಲಾಕಯಾ ವಾ ಪಶ್ಚಾದಾರಭ್ಯಪ್ರಾಗಂತಾಃ ಉದಕ್‌ಸಂಸ್ಥಾಃ ದ್ವ್ಯಂಗುಲಾಂತರಾಃ ನವಸಂಖ್ಯಾಕಾಃ ಪ್ರಣವಾದಿ ನಮೋಂತ್ಯೈಃ ಹರಿಣ್ಯಾದಿ ನವನಾಮಭಿಃ ರೇಖಾಃ ಕುರ್ಯಾತ್ । ಓಂ ಹರಿಣ್ಯೈ ನಮಃ ॥೧॥ ಓಂ ಸುಪ್ರಭಾಯೈನಮಃ ॥೨॥ ಓಂ ಲಕ್ಷ್ಮ್ಯೈನಮಃ ॥೩॥ ಓಂ ವಿಭೂತ್ಯೈ ನಮಃ ॥೪॥ ಓಂ ವಿಮಲಾಯೈ ನಮಃ ॥೫॥ ಓಂ ಪ್ರಿಯಾಯೈ ನಮಃ ॥೬॥ ಓಂ ಜಯಾಯೈ ನಮಃ ॥೭॥ ಓಂ ಜ್ವಾಲಾಯೆ ನಮಃ ॥೮॥ ಓಂ ವಿಶೋಕಾಯೈ ನಮಃ ॥೯॥ ಪುನಃ ದಕ್ಷಿಣಾರಂಭಾಃ ಉದಗಂತಾಃ ಪ್ರಾಕ್‌ಸಂಸ್ಥಾಃ ದ್ವ್ಯಂಗುಲಾಂ ತರಾಃ ನವಸಂಖ್ಯಾಃ ಪೂರ್ವೋಕ್ತ ನವನಾಮಭೀ ರೇಖಾಃ ಕುರ್ಯಾತ್ ।

## ಬ್ರಹ್ಮಾದಿದೇವತಾಸ್ಥಾಪನಂ

೯) ತತಸ್ತತುಃ ಷಷ್ಠಿ ಕೋಷ್ಠಯುತ ವಾಸ್ತುಪೀಠೇ ಪ್ರಣವಾದ್ಯೈಃ ಚತುರ್ಥ್ಯಂತ್ಯೈ ನಮೋಂತ್ಯೈಃ ವಕ್ಷ್ಯಮಾಣನಾಮಭಿಃ ಬ್ರಹ್ಮಾದಿ ದೇವಾನಾವಾಹ್ಯ ಸ್ಥಾಪಯೇತ್ ತದ್ಯಥಾ ವಾಸ್ತುಪೀಠೇ ಮಧ್ಯಸ್ಥ ಕೋಷ್ಠ ಚತುಷ್ಟಯೇ ಬ್ರಹ್ಮಾಪೂಜ್ಯಃ ।

ಓಂ ಬ್ರಹ್ಮಣೇನಮಃ ಬ್ರಹ್ಮಾಣಂ ಆವಾಹಯಾಮಿ ॥೧॥ ಆವಾಹಯಾಮಿತ್ಯೇವಂ ಸರ್ವತ್ರ ಊಹ್ಯಂ । ಪೂರ್ವೇಕೊಷ್ಠದ್ವಯೇ ಓಂ ಇಂದ್ರಾಯನಮಃ ಇಂದ್ರಂ ॥೨॥ ದಕ್ಷಿಣಕೋಷ್ಠದ್ವಯೇ ಓಂ ಯಮಾಯನಮಃ ಯಮಂ ॥೩॥ ಪಶ್ಚಿಮಕೋಷ್ಠ ದ್ವಯೇ ಓಂ ವರುಣಾಯನಮಃ ವರುಣಂ ॥೪॥ ಉತ್ತರಕೋಷ್ಠದ್ವಯೇ ಓಂ ಸೋಮಾಯನಮಃ ಸೋಮಂ ॥೫॥ ಆಗ್ನೇಯಕೋಷ್ಠೇ ಓಂ ಅಗ್ನಿಯೇ ನಮಃ ಅಗ್ನಿಂ ॥೬॥ ನೈಋತ್ಯಕೋಷ್ಠೇ ಓಂ ನಿರ್ಋತಯೇ ನಮಃ ನಿರ್ಋತಿಂ ॥೭॥ ವಾಯವ್ಯಕೋಷ್ಠೇ ಓಂ ವಾಯವೇನಮಃ ವಾಯುಂ ॥೮॥ ಈಶಾನ್ಯಕೋಷ್ಠೇ ಓಂ ಈಶಾನಾಯನಮಃ ಈಶಾನಂ ॥೯॥ ಇಂದ್ರಾದಿ ಪಂಕ್ತ್ಯಪೇಕ್ಷಯಾ ಬಹಿಃ ಪಂಕ್ತೌ ಪೂರ್ವಾಗ್ನೇಯಮಧ್ಯೆ ಓಂ ಕಾಮಾಯನಮಃ ಕಾಮಂ ॥೧೦॥ ಆಗ್ನೇಯಾಂ ಓಂ ಧಾತ್ರೇನಮಃ ಧಾತಾರಂ ॥೧೧॥ ಆಗ್ನೇಯ ದಕ್ಷಿಣಮಧ್ಯೇ ಓಂ ವಿಧಾತ್ರೇಯನಮಃ ವಿಧಾತಾರಂ ॥೧೨॥ ತತ್ರೈವ ಸ್ಕಂದಾಯನಮಃ ಸ್ಕಂದಂ ॥೧೫॥ ದಕ್ಷಿಣ ನಿರ್ಋತಿ ಮಧ್ಯೆ ಓಂ ಕಾಮಾಯನಮಃ ಕಾಮಂ ॥೧೪॥ ಕೋಣಕೋಷ್ಠೇ ಓಂ ಧಾತ್ರೇ ನಮಃ ಧಾತಾರಂ ॥೧೫॥ ವಾಯು ಸೋಮಮಧ್ಯೆ ಓಂ ವಿಧಾತ್ರೇಯನಮಃ ವಿಧಾತಾರಂ ॥೧೬॥ ತತ್ರೈ ಓಂ ಸ್ಕಂದಾಯನಮಃ ಸ್ಕಂದಂ ॥೧೭॥

ವರುಣವಾಯುಮಧ್ಯೆ ಓಂ ಕಾಮಾಯನಮಃ ಕಾಮಂ ॥೧೮॥ ಕೋಣಕೋಷ್ಠೆ ಓಂ ಧಾತ್ರೇನಮಃ ಧಾತಾರಂ ॥೧೯॥ ವಾಯು ಸೋಮಮಧ್ಯೇ ಓಂ ಓಂ

ವಿಧಾತ್ರೇನಮಃ ವಿಧಾತಾರಂ ॥೨೦॥ ತತ್ರೈವ ಓಂ ಸ್ಕಂದಾಯನಮಃ ಸ್ಕಂದಂ ॥೨೧॥ ಸೋಮೇಶಾನಮಧ್ಯೇ ಓಂ ಕಾಮಾಯನಮಃ ಕಾಮಂ ॥೨೨॥ ಐಶಾನ್ಯಾಂ ಓಂ ಧಾತ್ರೇನಮಃ ಧಾತಾರಂ ॥೨೩॥ ಈಶಾನೇಂದ್ರಿಯೋರ್ಮಧ್ಯೆ ಓಂ ವಿಧಾತ್ರೇನಮಃ ವಿಧಾತಾರಂ ॥೨೪॥ ತತ್ರೈವ ಸ್ಕಂದಾಯನಮಃ ಸ್ಕಂದಂ ॥೨೫॥

ಇಂದ್ರಾದಿ ಪಂಕ್ತ್ಯಪಂಕ್ತ್ಯಪೇಕ್ಷಯಾ ಬಹಿಃ ಪಂಕ್ತೌ ಪೂರ್ವದಿಶಿ ಕೋಷ್ಠದ್ವಯೇ ಓಂ ಸೂರ್ಯಾಯನಮಃ ಸೂರ್ಯಂ ॥೨೬॥ ಏವಂ ದಕ್ಷಿಣ ದಿಶಿ ಕೋಷ್ಠದ್ವಯೇ ಓಂ ವಿನಾಯಕಾನಮಃ ವಿನಾಯಕಂ ॥೨೭॥ ಪಶ್ಚಿಮ ಕೋಷ್ಠದ್ವಯೇ ಓಂ ಕಾಲಾಯನಮಃ ಕಾಲಂ ॥೨೮॥ ಉತ್ತರದಿಶಿಕೋಷ್ಠದ್ವಯೇ ಓಂ ಕುಬೇರಾಯ ನಮಃ ಕುಬೇರಂ ॥೨೯॥ ಆವಾಹಯಾಮಿ ॥

ಕಾಮಾದಿಪಂಕ್ತ್ಯಪೇಕ್ಷಯಾ ಬಹಿಃ ಪಂಕ್ತೌ ಪರಿತಃ ಅವಶಿಷ್ಟ ಕೋಣೇಷು ಪೂರ್ವಾದಿ ಕ್ರಮೇಣ ಹರಿಮಾತ್ರಾದಿ ದೇವಾನ್ ಆದಿಮ ಅರ್ಧಕೋಷ್ಠಾದಾರಭ್ಯ ಐಶಾನೀ ಪರ್ಯಂತಂ ಪೂಜಯೇತ್ । ಓಂ ಹರಯೇನಮಃ ಹರಿಂ ॥೩೦॥ ಓಂ ಹರಾಯನಮಃ ಹರಂ ॥೩೧॥ ಓಂ ಗಭೀರಾಯನಮಃ ಗಭೀರಂ ॥೩೨॥ ಓಂ ಗಾಹನಾಯನಮಃ ಗಹನಂ ॥೩೩॥ ಓಂ ಗಹನಾಯ ನಮಃ ಗಹನಂ ॥೩೪॥ ಓಂ ಗುಹಾಯನಮಃ ಗುಹಂ ॥೩೫॥ ಓಂ ಭಾನವೇನಮಃ ಭಾನುಂ ॥೩೬॥ ಓಂ ಅಂಗಾರಕಾಯನಮಃ ಅಂಗಾರಕಂ ॥೩೭॥ ಅಂತಿಮ ಅರ್ಧಕೋಷ್ಠ ಪರ್ಯಂತಂ ಸ್ಥಾಪಯೇತ್ ।

ಪುನಃ ದಕ್ಷಿಣೇ ಆದಿಮ ಅರ್ಧಕೋಷ್ಠೇ ಓಂ ದಾರುಣಾಯನಮಃ ದಾರುಣಂ ॥೩೮॥ ವಿದರಾಯನಮಃ ವಿದರಂ ॥೩೯॥ ಓಂ ದ್ಯೋತಾಯನಮಃ ದ್ಯೋತಂ ॥೪೦॥ ಓಂ ಪ್ರದ್ಯೋತಾಯನಮಃ ಪ್ರದ್ಯೋತಂ ॥೪೧॥ ಓಂ ದ್ಯೋತನಾಯನಮಃ ದ್ಯೋತನಂ ॥೪೨॥ ಓಂ ಹರಯೇ ನಮಃ ಹರಿಂ ॥೪೩॥ ಓಂ ಮೃತ್ಯವೇನಮಃ ಮೃತ್ಯುಂ ॥೪೪॥ ಓಂ ಶನೈಶ್ಚರಾಯನಮಃ ಶನೈಶ್ಚರಮ್ ॥೪೫॥ ಅಂತಿಮ ಅರ್ಧಕೋಷ್ಠ ಪರ್ಯಂತಂ ಸ್ಥಾಪಯೇತ್ ।

ಪುನ ಪಶ್ಚಿಮೇ ಅರ್ಧಕೋಷ್ಠಾದಾರಭೇತ್ । ಓಂ ಪುಷ್ಕರಾಯನಮಃ ಪುಷ್ಕರಂ ॥೪೬॥ ಓಂ ಕ್ಷರಣಾಯನಮಃ ಕ್ಷರಣಂ ॥೪೭॥ ಓಂ ಕ್ಷಾರಾಯನಮಃ ಕ್ಷಾರಂ ॥೪೮॥ ವೀಕ್ಷಣಾಯನಮಃ ವೀಕ್ಷಣಂ ॥೪೯॥ ಓಂ ಕ್ಷೋಭಣಾಯನಮಃ ಕ್ಷೋಭಣಂ ॥೫೦॥ ಓಂ ಕ್ಷರಾಯನಮಃ ಕ್ಷರಂ ॥೫೧॥ ಓಂ ಚಾರ್ವಂಗಾಯನಮಃ ಚಾರ್ವಂಗಂ ॥೫೨॥ ಓಂ ಭಾರ್ಗವಾಯನಮಃ ಭಾರ್ಗವಂ ॥೫೩॥ ಅಂತಿಮಅರ್ಧಕೋಷ್ಠ ಪರ್ಯಂತಮ್ ಸ್ಥಾಪಯೇತ್ ।

ಪುನಃ ಉತ್ತರೇ ಆದಿ ಅರ್ಧಕೋಷ್ಠಾದಾರಭೇತ್ । ಓಂ ಚಾರಾಯನಮಃ ಚಾರಂ ॥೫೪॥ ಓಂ ವಿಚಾರಾಯನಮಃ ವಿಚಾರಂ ॥೫೫॥ ಓಂ ಪ್ರಚರಾಯ ನಮಃ ಪ್ರಚರಂ ॥೫೬॥ ಓಂ ಸಂಚಾರಾಯನಮಃ ಸಂಚಾರಂ ॥೫೭॥ ಓಂ ಚಾರಣಾಯನಮಃ ಚಾರಣಂ ॥೫೮॥ ಓಂ ಚರಾಯನಮಃ ಚರಂ ॥೫೯॥ ಓಂ ಬೃಹಸ್ಪತಯೇನಮಃ ಬೃಹಸ್ಪತಿಂ ॥೬೦॥ ಓಂ ಬುಧಾಯನಮಃ ಬುಧಂ ॥೬೧॥ ಅಂತಿಮ ಅರ್ಧಕೋಷ್ಠ ಪರ್ಯಂತಂ ಏಕಷಷ್ಠಿದೇವಾನ್ ಸ್ಥಾಪಯೇತ್ ಪೂಜಯೇತ್ ॥

## ವಾಸ್ತು ಪುರುಷ ಸ್ಥಾಪನಮ್

೯) ತತಃ ಅದ್ಯಪೂರ್ವೋಚ್ಚರಿತ ಶುಭತಿಥೌ ವಾಸ್ತುಶಾಂತ್ಯಾಂಗಭೂತಂ ವಾಸ್ತುಕಲಶ ಸ್ಥಾಪನಂ ಪೂಜನಂಚ ಕರಿಷ್ಯೇ । ಮಹಿದ್ಯೌರಿತ್ಯಾದಿ ವಿಧಿನಾ ಪೂರ್ಣ ಪಾತ್ರ ನಿಧಾನಾಂತೇ ಸಾಷ್ಟದಲಪದ್ಮೇ ಯಥಾಶಕ್ತಿ ಸುವರ್ಣನಿರಿತ್ಮತಾಂ ಅಗ್ನ್ಯುತ್ತಾರಿತಾಂ ವಾಸ್ತು ಪುರಷಾಯ ವರಾಹ ಪತ್ರಾಯನಮಃ ಇತಿ ಮಂತ್ರೇಣ ಚ ಸಂಸ್ಥಾಪ್ಯ । ಷೋಡಶೋಪಚಾರೈಃ ಸಂಪೂಜ್ಯ । ಕಲಶಸ್ಯಮುಖೇ ವಿಷ್ಣು ಇತ್ಯಾದಿ ಕಲಹ ಪ್ರಾರ್ಥನಾಂತಂ ಕುರ್ಯಾತ್ ।

## ಬ್ರಹ್ಮಾದಿ ದೇವತಾಧ್ಯಾನಂ

೧೦) ಬ್ರಹ್ಮಾ ಚತುರ್ಮುಖೋ ರಕ್ತೋಲಂಬಕೂರ್ಚಶ್ಚತುರ್ಮುಖಃ । ಅಕ್ಷಮಾಲಾಂ ಸ್ರುವಂದಕ್ಷೇ ವಾಮೇ ದಂಡಕಮಂಡಲೂ ॥೧॥ ದಧಾನಮಷ್ಟ ಪಾಲಾನಾಂ ಯಜೇನ್ಮಧ್ಯೇಽಬುಂಜಾಸನಂ । ಸರ್ವೇ ಚತುರ್ಭುಜೋ ದೇವಾಃ ವಾಸ್ತುದೇಹೇ ವ್ಯವಸ್ಥಿತಾಃ ॥೨॥ ಸ್ವಸ್ವಸ್ಥಾನ ಸ್ಥಿತಾಃ ಸರ್ವೇ ಕೃತಾಂಜಲಿ ಪುಟಾಸ್ತಥಾ ಬ್ರಹ್ಮಾಣಂ ಸನ್ನಿರೀಕ್ಷಂತೇ ತದ್ವಕ್ತ್ರಾಭಿಮುಖಾಶ್ಚತೇ ॥೩॥ ಸಂಪ್ರಾರ್ಥ್ಯ ।

## ಶಾಂತಿಹೋಮಾರಂಭಃ

೧೧) ವಾಸ್ತು ಮಂಡಲಾನ್ನೈಋತ್ಯಾಂ ಪಶ್ಚಿಮೇ ವಾ ಆಚಾರ್ಯಃ ಉಪವಿಶ್ಯ । ಆಚಮ್ಯ । ಅದೇತ್ಯಾದಿ..... ಶುಭತಿಥೌ..... ಶ್ರೀ ವಿಷ್ಣು ಪ್ರೀತ್ಯರ್ಥಂ ವಾಸ್ತು ಶಾಂತ್ಯಂಗಭೂತಂ (ಕುಂಡೇ) ಸ್ಥಂಡಿಲೋಲ್ಲೇಖನಾದಿ ಸಕಲಂ ಕರ್ಮ ಕರಿಷ್ಯೇ ॥ ತದ್ಗೋಮಯೇನ ಪ್ರದಕ್ಷಿಣಮುಪಲಿಪ್ಯ ಇತ್ಯಾದಿ..... ವಾಗ್ಯತೋ ಭವೇತ್ । ಇತ್ಯಂತ ಕೃತ್ವಾ ।

ಕುಂಡೇ ಸ್ಥಡಿಲೇ ವಾ । ಸ್ವಾಹಾಯೈ ನಮಃ ಸ್ವಾಹಾಂ ಆವಾಹಯಾಮಿ । ಓಂ ಭಾರತ್ಯೈನಮಃ ಭಾರತೀಂ ಆವಾಹಯಾಮಿ । ಓಂ ಶ್ರೀ ಓಂ ಶ್ರೀ ಓಂ ಋತುಸ್ನಾತಾಂ

ಹರಿಣೀಂ ಲಕ್ಷ್ಮೀಮನುಸಂಧಾಯ । ಸ್ವಭರ್ತುಃ ಸಂಸ್ಥಿತಾಮಂಕೇ ದೇವಾನಾಂ ಹವ್ಯವಾಹಿನೀಂ । ರಕ್ತವರ್ಣಾಂ ರಕ್ತವಸ್ತ್ರಾಂ ಧ್ಯಾಯೇಜ್ವಲನ ಸುಂದರೀಂ ॥ ಇತಿ ಸ್ವಾಹಾಂ ಧ್ಯಾತ್ವಾ ತತ್ರೈವ ತದಂತಸ್ಥಾಂ ಭಾರತೀಂ ಧ್ಯಾಯೇತ್ ।

ಉದ್ಯದ್ದಿವಾಕರ ಸಮೂಹನಿಭಾಂ ಸ್ವಭರ್ತುರಂಕಸ್ಥಿತಾಮುಭಯ ಸದ್ವರ ಬಾಹುಯುಗ್ಮಾಂ । ಮುದ್ರಾಂಚ ತತ್ವದೃಶಯೇವರಪುಸ್ತಕಂಚ ದೋರ್ಯುಗ್ಮಕೇನ ದಧತೀಂ ಸ್ಮರತಾತ್ಮವಿದ್ಯಾಂ ॥ ಇತಿ ಭಾರತೀಂ ಧ್ಯಾತ್ವಾ ಲಕ್ಷ್ಮೀಂ ಧ್ಯಾಯೇತ್ ॥

ಕೌಶೇಯ ರಕ್ತವಸನಾಂ ಅರವಿಂದನೇತ್ರಾಂ ಪಾಶಾಂಕುಶಾಭಯವರೋದ್ಯತ ಪದ್ಮಹಸ್ತಾಂ । ಉದ್ಯಚ್ಛತಾರ್ಕ ಸದೃಶೀಂ ಪರಮಾಕಸಂಸ್ಥಾಂಧ್ಯಾಯೇದ್ವಿಧೀಶನ ತಪಾದಯುಗಾಂ ಜನಿತ್ರೀಂ ॥ ಇತಿ ಲಕ್ಷ್ಮೀಂ ಧ್ಯಾತ್ವಾ ॥

## ಅಗ್ನಿಸ್ಥಾಪನಮ್

೧೨) ತತಸ್ವೈಜಸೇನಾಸಂಭವೇನ ಮೃಣ್ಮಯೇನ ವಾ ಇತ್ಯಾದಿ ಅಗ್ನಿ ಪ್ರತಿಷ್ಠಾಪನೇ ವಿನಿಯೋಗ ಇತ್ಯಂತಮ್ । ಓಂ ಭೂರ್ಭುವಃಸ್ವರೋಂ । ವಿಷ್ಣು ವೀರ್ಯಾತ್ಮಕಂ ವರದನಾಮಾಗ್ನಿಂ ಪ್ರತಿಷ್ಠಾಪಯಾಮಿ । ಇತ್ಯಗ್ನಿಂ ಪ್ರತಿಷ್ಠಾಪ್ಯ ಪಾತ್ರೇ ಅಕ್ಷತೋದಕಂ ಪ್ರಾಶ್ಯ । ಪ್ರೋಕ್ಷಿತೇಂಧನಾನಿ ತುಲಸೀಕಾಷ್ಠಾನಿ ಸುಗಂಧ ದ್ರವ್ಯಾಣಿ ನಿಕ್ಷಿಪ್ಯ ।

## ಗ್ರಹಸ್ಥಾಪನಮ್

೧೩) ಅದ್ಯೇತ್ಯಾದಿ ಶುಭತಿಥೌ ಭಾರತೀರಮಣ.....ಶ್ರೀ ವಿಷ್ಣು ಪ್ರೀತ್ಯರ್ಥಂ ವಾಸ್ತು ಶಾಂತ್ಯಂಗಭೂತಂ ಅದಿತ್ಯಾದಿ ನವಗ್ರಹಾಂತರ್ಗತ ಭಾರತೀ.....ಶ್ರೀ ಶಿಂಶುಮಾರ ಪ್ರೀತ್ಯರ್ಥಂ ನವಗ್ರಹಸ್ಥಾಪನಂ ಪೂಜನಂ ಚ ಕರಿಷ್ಯೇ । ಅಗ್ನೇರೈಶಾನ್ಯಾಂ ಶಿಂಶುಮಾರಂ ಗ್ರಹಾಂಶ್ಚ ತಥಾ ಗ್ರಹಕಲಶಂಚ ಸಂಸ್ಥಾಪ್ಯ । ತತ್ರ ವರುಣಂ ಸಂಪೂಜ್ಯ । ಪೂರ್ಣಪಾತ್ರೇ ಸಾಷ್ಟದಲಪದ್ಮೇ ಶಿಂಶುಮಾರಂ ಷೋಡಶೋಪಚಾರ ಪೂಜನ ಪೂರ್ವಕಂ ಓಂ ಶಿಂಶುಮಾರಾಯ ನಮಃ । ಇತಿ ಮಂತ್ರೇಣ ಸಂಪೂಜ್ಯ ಕಲಶಸ್ಯಮುಖೇ ವಿಷ್ಣುರಿತ್ಯಾದ್ಯೈಃ ಸಂಪ್ರಾರ್ಥ್ಯ ।

## ಅಗ್ನಿ ಪ್ರಜ್ವಲನಮ್

೧೪) ತತಃ ಅಗ್ನಿ ಸಮೀಪಮೇತ್ಯ । ವೇಣುಧಮನ್ಯಾ ಪ್ರಭೋಧ್ಯಧ್ಯಾಯೇತ್ । ಓಂ ಅಗ್ನಿಮಂಡಲ ಮಧ್ಯಸ್ಥಂ ಚತುರ್ಬಾಹುಂ ಕಿರೀಟನಂ । ಭಕ್ತಾಭೀಷ್ಟಪ್ರಾದತಾರಂ ಧ್ಯಾಯೇದ್ಯಜ್ಞಭುಜಂ ಹರಿಂ ॥೧॥ ಕುಂಡಮಧ್ಯೇ ಸ್ಥಿತಾಂ ಲಕ್ಷ್ಮೀಂ

ಸರ್ವಾಭರಣಭೂಷಿತಾಂ । ಸರ್ವಾವಯವ ಸಂಪೂರ್ಣಾಂ ಋತುಸ್ನಾತಾಂ ವಿಚಿಂತಯೇತ್ ॥೨॥

## ಷೋಡಶ ಸಂಸ್ಕಾರ ಸಿದ್ಧಿಃ

೧೬) ಅದ್ಯೇತ್ಯಾದಿ.....ಶುಭತಿಥೌ ಭಾರತೀರಮಣ.... ಶ್ರೀ ವಿಷ್ಣುಪ್ರೀತ್ಯರ್ಥಂ ಅಗ್ನೇಃ ಗರ್ಭಾದಾನಾದಿ ಷೋಡಶ ಸಂಸ್ಕಾರ ಸಿಧ್ಯರ್ಥಂ ವ್ಯಸ್ತ ಸಮಸ್ತ ವ್ಯಾಹೃತ್ಯಾ ಆಜ್ಯಾಹುತೀರ್ಹೋಷ್ಯೇ। ಸಂಸ್ಕಾರ ಹೋಮಾರ್ಥಂ ಆಜ್ಯಮುತ್ಪೂಯ..... ಸ್ರುವಂ ಸಮ್ಮೃಜ್ಯ । ಭೂರಾದಿದೇವತಾ ಧ್ಯಾನಂ ಕುರ್ಯಾತ್ ।

ವಾಸುದೇವಾದಿಕಾ : ಶುಕ್ಲರಕ್ತಪೀತಸಿತೋಜ್ವಲಾಃ ಚಕ್ರಶಂಖಗದಾಭ್ಜೇತಃ ಪ್ರಥಮೋಮುಸಲೀ ಹಲೀ ॥೧॥ ಸಶಂಖ ಚಕ್ರಸ್ತ್ವ ಪರಸ್ತೃತೀಯ ಶಾರ್ಙ್ಗಬಾಣ ವಾನ್ । ಸಶಂಖ ಚಕ್ರಸ್ತುರ್ಯಸ್ತು ಚಕ್ರಶಂಖಾಸಿ ಚರ್ಮವಾನ್ ॥೨॥ ಇತಿ ಧ್ಯಾತ್ವಾ ಸಂಸ್ಕಾರಹೋಮಂ ಕುರ್ಯಾತ್ ।

ಸ್ರುವೇಣಾಜ್ಯಮಾದಾಯ। ಓಂ ಭೂಸ್ಸ್ವಾಹಾ ಅಗ್ನಯೇ ಶ್ರೀ ಅನಿರುದ್ಧಾಯೇದಂ । ಓಂ ಭುವಃ ಸ್ವಾಹಾ ವಾಯವೇ ಶ್ರೀ ಪ್ರದ್ಯುಮ್ನಾಯೇದಂ । ಓಂ ಸ್ವಸ್ಸ್ವಾಹಾ ಸೂರ್ಯಾಯ ಶ್ರೀ ಸಂಕರ್ಷಣಾಯೇದಂ । ಓಂ ಭೂರ್ಭುವಃ ಸ್ವಸ್ಸ್ವಾಹಾ ಪ್ರಜಾಪತಯೇ ಶ್ರೀ ವಾಸುದೇವಾಯೇದಂ ನಮಮ । ಸಾಂಗತಾಸಿಧ್ಯರ್ಥಂ ಪೂರ್ಣಾಹುತಿರ್ಹೋಷ್ಯೆ । ಓಂ ಭೂರ್ಭುವಃ ಸ್ವಸ್ಸ್ವಾಹಾಪ್ರಜಾಪತಯೇ ಶ್ರೀ ವಾಸುದೇವಾಯೇದಂ । ಇತಿಪೂರ್ಣಾಹುತಿಂಹುತ್ವಾ।

ಏವಂ ಅವಶಿಷ್ಟ ಪುಂಸವನಾದಿ ವಿವಾಹಾಂತಾ (೧೫) ಪಂಚದಶಸಂಸ್ಕಾರಾನ್ ಕುರ್ಯಾತ್ । ಏವಂ ಕೃತೇ ಸತಿ ಅಶೀತಿ ಸಂಖ್ಯಾಕಾಭಿಃ ಆಜ್ಯಾಹುತಯೋ ಭವಂತಿ । *

## ವೈಷ್ಣವ ಹೋಮ

೧೭) ಅಗ್ನೇಃ ವೈಷ್ಣವತ್ವಸಿಧ್ಯರ್ಥಂ ವಿಷ್ಣ್ವಾಹುತೀ ಅಜ್ಯೈರ್ಹೋಷ್ಯೆ ಓಂ ನಮೋ ನಾರಾಯಣಾಯ ಸ್ವಾಹಾ ನಾರಾಯಣಾಯೇದಂ ಅಷ್ಟವಾರಂ। ಓಂ ಸಹಸ್ರಶೀರ್ಷಾ ಪುರುಷಃ..... ದಶಾಂಗುಲಂ ಸ್ವಾಹಾ ॥೧॥ ಓಂ ಪುರುಷ ಏವೇದಂ.....ರೋಹತಿಸ್ವಾಹಾ ॥೨॥ ಓಂ ಏತಾವಾನಸ್ಯ......ದಿವಿಸ್ವಾಹಾ ॥೩॥ ಓಂ ತ್ರಿಪಾದೂರ್ಧ್ವ.......ಅಭಿಸ್ವಾಹಾ ॥೪॥ ಓಂ ತಸ್ಮಾದ್ವಿರಾಳ.....ಪುರಃ ಸ್ವಾಹಾ ॥೫॥ ಓಂ ಯತ್ಪುರುಷೇಣ....ಹವಿಃಸ್ವಾಹಾ ॥೬॥ ಓಂ ತಂಯಜ್ಞಂ ಬರ್ಹಿಷಿ...ಶ್ಚಯೇ ಸ್ವಾಹಾ ॥೭॥ ಓಂ ತಸ್ಮಾದ್ಯಜ್ಞಾ.....ಶ್ಚಯೇಸ್ವಾಹ ॥೮॥ ಓಂ ತಸ್ಮಾದ್ಯಜ್ಞಾತ್ಸರ್ವ

ಹುತಭುಜಃ.......ಅಜಾಯತ ಸ್ವಾಹಾ ॥೯॥ ಓಂ ತಸ್ಮಾದಶ್ವಾ....ಅಜಾವಯಃಸ್ವಾಹಾ ॥೧೦॥ ಓಂ ಯತ್ಪುರುಷಂ ವ್ಯದಧುಃ.... ಉಚ್ಯೇತೇಸ್ವಾಹಾ ॥೧೧॥ ಓಂ ಬ್ರಾಹ್ಮಣೋಸ್ಯ.....ಅಜಾಯತಸ್ವಾಹಾ ॥೧೨॥ ಓಂ ನಾಭ್ಯಾಆಸೀ... ಅಕಲ್ಪಯನ್‌ಸ್ವಾಹಾ ॥೧೪॥ ಓಂ ಸಪ್ತಾಸ್ಯಾಸನ್......ಪುರುಷ ಪಶುಂ ಸ್ವಾಹಾ ॥೧೫॥ ಓಂ ಯಜ್ಞೇನಯಜ್ಞ ಮಯಜಂತ.........ಸಂತಿದೇವಾಸ್ವಾಹಾ ॥೧೬॥

### ಅಗ್ನೌ ಸಂಕ್ಷಿಪ್ತ ಪೀಠಾವರಣ ಪೂಜನಮ್

೧೮) ಓಂ ಪರದೇವತಾಯೈ ಶ್ರೀ ಲಕ್ಷ್ಮೀನಾರಾಯಣಾಯನಮಃ । ವಿಷ್ಣೋ ರಾಸನಭೂತಾಯ ದಿವ್ಯರತ್ನಮಯಾಯಚ । ಪ್ರಧಾನ ಪುರುಷೇಶಾಯ ಮಹಾಪೀಠಾಯತೇನಮಃ । ಇತಿ ಅಗ್ನೌ ಪೀಠದೇವತಾಭ್ಯೋನಮಃ ಸರ್ವೋಪಚಾರಾರ್ಥೇ ಅಕ್ಷತಾನ್ ಸಮರ್ಪಯಾಮಿ । ಇತಿ ಪೀಠಪೂಜನಮ್ ।

ತತಃ ಓಂ ಭಾಂ ಭಾರ್ಗವಾಯನಮಃ ಇತಿ ಪರುಶರಾಮಮಾವಾಹ್ಯ ಅರ್ಘ್ಯಾದಿ ಪುಷ್ಪೋಪಚಾರಾಂತಂ ಕೃತ್ವಾ ಆವರಣ ದೇವತಾಭ್ಯೋ ನಮಃ ಸರ್ವೋಪಚಾರಾರ್ಥೇ ಅಕ್ಷತಾಂ ಸಮರ್ಪಯಾಮಿ । ಇತ್ಯಾವರಣ ಪೂಜನಮ್ ।

### ಅಗ್ನಿ ಮೂರ್ತಿಧ್ಯಾನಮ್

೧೯) ಚತ್ವಾರಿ ಶೃಂಗೇತ್ಯಸ್ಯ ಗೌತವೋ ವಾಮದೇವೋಗ್ನಿ ಸ್ತ್ರಿಷ್ಟುಪ್ । ಅಗ್ನಿಮೂರ್ತಿಧ್ಯಾನೇ ವಿನಿಯೋಗಃ । ಓಂ ಚತ್ವಾರಿಶೃಂಗಾ....ಆವಿವೇಶ । ಸಪ್ತಹಸ್ತ ಶ್ಚತುಶ್ಶೃಂಗಃ.......ಏವಂ ರೂಪೋಹುತಾಶನಃ । ತದಂತಸ್ಥ ಮುಖ್ಯ ಪ್ರಾಣಧ್ಯಾನಂ ।

* ಸಂಕ್ಷೇಪಕರಣೇ ಸಮಸ್ತವ್ಯಾಹೃತ್ಯಾ ಷೋಡಶವಾರಂ। ಅತಿಸಂಕ್ಷೇಪೇತು ವ್ಯಸ್ತ ಸಮಸ್ತವ್ಯಾಹೃತ್ಯಾ ಚತುರ್ವಾರಂ ಪೂರ್ಣಾಹುತ್ಯರ್ಥಂ ಏಕವಾರಂ ಏವಂ ಪಂಚಾಜ್ಯಾಹುತೀರ್ಹೋಷ್ಯೇ । ಇತಿ ಸಂಕಲ್ಪಃ ಕೃತ್ವಾ ಕಾರ್ಯಃ ।

ಉದ್ಯದವಿಪ್ರಕರಸನ್ನಿಭಮಚ್ಯುತಾಂಕೇ ಸ್ವಾಸೀನಮಸ್ಯ ನುತಿನಿತ್ಯವಚಃ ಪ್ರವೃತ್ತಿಂ । ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ ಪ್ರಾಣಂಯಥೇಷ್ಟ ತನುಮುನ್ನತ ಕರ್ಮಶಕ್ತಿಂ ॥

ತದಂತಸ್ಥ ಪರಶುರಾಮ ಧ್ಯಾನಮ್ - ಅಂಗಾರವರ್ಣಮಭಿತೋಂಡಬಹಿಃ ಪ್ರಭಾಭಿರ್ವ್ಯಾಪ್ತಂ ಪರಶ್ವಧ ಧನುರ್ಧರಮೇಕವೀರಂ। ಧ್ಯಾಯೇದಜೇಶ ಪುರುಹೂತ ಮುಖೈಸ್ತುವದ್ಭಿರಾವೀತಮಾತೃ ಪದವೀಂ ಪ್ರತಿಪಾದಯಂತಂ ॥ ಓಂ ಏಷಹಿದೇವಃ ಪ್ರದಿಶೋನು......ವಿಶ್ವತೋ ಮುಖಃ ।

ಅಗ್ನ್ಯಂತರ್ಗತ ಮುಖ್ಯ ಪ್ರಾಣಾಂತರ್ಗತ ಯಜ್ಞಪುರುಷಾತ್ಮಕ ಹರಿಣೇ ಪತಿ ಶ್ರೀ ಪರಶುರಾಮ ಮಮ ಸಂಮುಖೋ ವರದೋ ಭವ ।

## ಅನ್ವಾಧಾನಮ್

೨೦) ಸಮಿದ್ವಯಮಾದಾಯ ಕ್ರಿಯಮಾಣೇ ವಾಸ್ತುಕರ್ಮಣಿ ಅನ್ವಾಧಾನಂ ಕರಿಷ್ಯೇ । ಅಸ್ಮಿನ್ನನ್ವಾಹಿತೇಗ್ನೌ ಜಾತವೇದ ಸಮಗ್ನಿಮಿಧ್ಮೇನ ಪ್ರಜಾಪತಿಂ ಪ್ರಜಾಪತಿಂಚ ಅಘಾರ ದೇವತೇ ಆಜ್ಯೇನ ಅಗ್ನಿಷೋಮೌ ಚಕ್ಷುಷಿ ಆಜ್ಯೇನ । ಅತ್ರ ಪ್ರಧಾನಂ । ಆದಿತ್ಯಾದಿ ನವಗ್ರಹಾನ್ ಸಮಿಚ್ಚರ್ವಾಜ್ಯಾಹುತಿಭಿಃ ಅಷ್ಟೋತ್ತರ ಸಹಸ್ರ ಅಷ್ಟಶತ ಅಷ್ಟಾವಿಂಶತಿ ಅನ್ಯತಮಸಂಖ್ಯಾಭಿಃ । ಅಧಿದೇವತಾಃ ಪ್ರತ್ಯಧಿ ದೇವತಾಶ್ಚ ತನ್ನ್ಯೂನ ಸಂಖ್ಯಾಭಿಃ ತೈರೇವದ್ರವ್ಯೈಃ । ಕ್ರತುಷಾಡ್ಗುಣ್ಯದೇವತಾಃ ಕ್ರತುಸಂರಕ್ಷಕ ದೇವತಾಶ್ಚ ಪೂರ್ವೋಕ್ತ ಸಂಖ್ಯಯಾನ್ಯೂನ ಸಂಖ್ಯಾಭಿಃ ತೈರೇವ ದ್ರವ್ಯೈಃ ।

ಬ್ರಹ್ಮಾದ್ಯಾವಾಹಿತ ದೇವತಾಃ ನಾಮಮಂತ್ರೈಃ ಪ್ರತ್ಯೇಕಂ ಉಕ್ತ ಸಂಖ್ಯಯಾನ್ಯೂನ ಸಂಖ್ಯಾಭಿಃ ಸಮಿತ್ತಿಲ ಪಾಯಸಾಜ್ಯಾಹುತಿಬಿಃ ।

ವಾಸ್ತೋಷ್ಪಂತಿಂ ವಾಸ್ತೋಷ್ಪತೇ ಇತಿ ಚತಸೃಭಿಃ ಋಗ್ಭಿಃ ಪ್ರತಿದ್ರವ್ಯಂ ಪ್ರತ್ಯೃಚಂ ಉಕ್ತಸಂಖ್ಯಾಹುತಿಭಿಃ ಸಮಿತ್ತಿಲ ಪಾಯಸಾಜ್ಯಾಹುತಿಭಿಃ । ಪುನರ್ವಾಸ್ತೋಷ್ಪತಿಂ ವಾಸ್ತೋಷ್ಪತೇ ಇತಿ ಚತುಸೃಭಿಃ ಋಗ್ಭಿಃ ವಾಸ್ತೋಷ್ಪತೇ ಧ್ರುವಾ ಸ್ಥೂಣಾಮಿತ್ಯನಯಾಚ ಕ್ರಮೇಣ ಪ್ರತ್ಯೃಚಂ ಪಂಚೈಕಾನ್ಯತರ ಸಂಖ್ಯಾಭಿಃ ಪಂಚಬಿಲ್ವ ಫಲಾಹುತಿಭಿಃ ತದ್ಬೀಜಾಹುತಿಭಿರ್ವಾ । ಶೇಷೇಣ ಸ್ವಿಷ್ಟಕೃತಮಿತ್ಯಾದಿ.... ಆಜ್ಯಭಾಗಾಂತಂ ತಂತ್ರಂ ಕೃತ್ವಾ ಪ್ರಧಾನ ಹೋಮಂ ಕುರ್ಯಾತ್ ।

## ಪ್ರಧಾನ ಹೋಮಾದಿ

೨೧) ಅನ್ವಾಧಾನೋಕ್ತ ಕ್ರಮೇಣ ವರಾಹುತಿ ಪೂರ್ವಕಂ ಹೋಮಂ ಕುರ್ಯಾತ್ । ಗಣಾನಾಂತ್ವಾ ಶೌನಕೋಗೃತ್ಸಮದೋ ಗಣಪತಿರ್ಜಗತೀ । ಗಣಪತ್ಯಂತರ್ಗತ ವಿಶ್ವಾಭಿನ್ನ ಶ್ರೀ ವಿಷ್ಣು ಪ್ರೀತ್ಯರ್ಥಂ ಹೋಮೇ ವಿನಿಯೋಗಃ । ಓಂ ಗಣಾನಾಂ ತ್ವಾ ಗಣಪತಿಂ......ಸಾದನಂ ಸ್ವಾಹಾ । ಗಣಪತ್ಯಂತರ್ಗತ ಶ್ರೀ ವಿಷ್ಣವ ಇದಂ ।

ಯಜಮಾನಃ ಪ್ರತ್ಯಾಹುತಿತ್ಯಾಗಸ್ಯ ಕರ್ತುಂ ಅಶಕ್ಯತ್ವಾತ್ ಇಮಾನಿ ಉಪ ಕಲ್ಪಿತಾನಿ ಹವನೀಯ ದ್ರವ್ಯಾಣಿ ಯಾಯಾಃ ಯಕ್ಷ್ಯಮಾಣ ದೇವತಾಭ್ಯಃ ತಾಭ್ಯ ಹುತಾನಿ ಹೋಷ್ಯಮಾಣಾನಿ ಚ ಮಯಾ ಸಕೃದೇವ ಪರಿತ್ಯಕ್ತಾನಿ ನಮಮೇತಿ ಅಕ್ಷತ ಜಲಮುತ್ಸೃಜೇತ್ ।

## ಅನ್ವಾಧಾನ ಕ್ರಮಃ

ಓಂ ಆಕೃಷ್ಣೇನ.....ಪಶ್ಯನ್ ಸ್ವಾಹಾ । ಇತಿ ಕ್ರಮೇಣ ನವಗ್ರಹಾಃ । ಓಂ ಬ್ರಹ್ಮಣೇ ಸ್ವಾಹೇತಿ ಬ್ರಹ್ಮಾದಿ ಹೋಮಾಃ । ಓಂ ವಾಸ್ತೋಷ್ಪತೇ.....ಇತಿ ಧ್ರುವಾ ಸ್ಥೂಣಾಮಿತ್ಯನಯಾ ಚ ಪೂರ್ವೋಕ್ತ ವಾಸ್ತುದೇವತಾ ಹೋಮಃ ಬಲ್ವ ಹೋಮಶ್ಚ । ಇತಿ ಹೋಮಕ್ರಮ ಃ ।

ಸ್ಥಾಪಿತದೇವಾನ್ ಸಂಪೂಜ್ಯ । ತತಃ ಸ್ವಿಷ್ಟಕೃದಾದಿ ಪ್ರಾಯಶ್ಚಿತ್ತ ಹೋಮಾಂತೇ ಯಜಮಾನಃ ಲೋಕಪಾಲೇಭ್ಯಃ ಗ್ರಹಪೀಠದೇವತಾಭ್ಯಃ ಕ್ಷೇತ್ರಪಾಲಾಯ ಚ ಸದೀಪಮಾಷ ಭಕ್ತ ಬಲಿಂ ದತ್ವಾ ದ್ವಾದಶಾಷ್ಟೌ ಚತುರ್ಗೃಹೀತೇನ ವಾ ಸ್ರುಚಂ ಪೂರಯಿತ್ವಾ। ಮೂರ್ಧಾನಮಿತಿ ಸಮುದ್ರಾದೂರ್ಮಿರಿತಿಸೂಕ್ತೇನ ಧಾಮಂತೇತಿ ವಾ ಪೂರ್ಣಾಹುತಿಂ ಜುಹುಯಾತ್ । ಪುನಃ ಸ್ಥಾಪಿತದೇವತಾಃ ಸಂಪೂಜ್ಯ ।

## ಯಜಮಾನಾಭಿಷೇಕಃ

೨೨) ಕುಲಶೋದಕಮಾದಾಯ ತತ ಆಚಾರ್ಯಾದಯಃ ಸಮುದ್ರ ಜ್ಯೇಷ್ಠಾ ಇತ್ಯಾದಿ ವೈದಿಕಮಂತ್ರೈಃ ಸುರಾಸ್ತ್ವೇತ್ಯಾದಿ ಪೌರಾಣಿಕ ಮಂತ್ರೈಶ್ಚ ಸಪತ್ನೀಕಂ ಯಜಮಾನಂ ಶಾಂತಿಕಲಶೋದಕೇನಾಭಿಷಿಂಚೇತ್ ।

## ಗೃಹವೇಷ್ಟನಮ್

೨೩) ತತೋ ಯಜಮಾನಃ ಸಋತ್ವಿಗಾಚಾರ್ಯೋ ವಾ ಪ್ರಾಗಾದಿತಃ ತ್ರಿಸೂತ್ರಾ ಶಂನಿಂದ್ರಾಗ್ನಿ......ರಾಕ್ಷೋಘ್ನ.....ಪಾವಮಾನಮಂತ್ರೈಃ ಸತೂರ್ಯ ಮಂಗಲಘೋಷ ಪೂರ್ವಕಂ ಗೃಹಂ ವೇಷ್ಟಯಿತ್ವಾ। ಸಮಂತಾದ್ ದುಗ್ಧಪೂರ್ಣಯಾ ಜಲಪೂರ್ಣಯಾ ಚ ಸಸ್ತನಕುಂಭ್ಯಾ ತಥೈವ ಸೂಕ್ತ ತ್ರಯೇಣ ಧಾರಾದ್ವಯಂ ಅವಿಚ್ಛಿನ್ನಂ ಕುರ್ಯಾತ್। ತತೋ ಮಧ್ಯ ಚತುಷ್ಕೋಷ್ಠಸ್ಥಿತ ಬ್ರಹ್ಮಸ್ಥಾನೇ ಸರೂಪಾಂ ಸ್ತ್ರೀರೂಪಾಂ ಪೃಥ್ವೀಂಧ್ಯಾತ್ವಾ। ಓಂ ಪೃಥಿವ್ಯೈ ನಮಃ ಇತಿ ಸಂಪೂಜ್ಯ ।

ಸರ್ವದೇವಮಯಂ ವಾಸ್ತು ವಾಸ್ತುದೇವಮಯಂ ಪರಂ । ಇತಿ ಪಠಿತ್ವಾ। ಗೃಹಸ್ಯ ಆಗ್ನೇಯಕೋಣೇ ಯಜಮಾನಪದೇನ ಜಾನುದಘ್ನಮವಟಂ ಖಾತ್ವಾ । ತಂ ಗೋಮಯೇನೋಪಲಿಪ್ಯ । ಶುಭ್ರಚಂದನ ಪುಷ್ಪಾಕ್ಷತಾದಿಭಿರಲಂಕೃತ್ಯ ಸರ್ವಧಾನ್ಯ ಬೀಜಾನಿ ದಧ್ಯೋದನಂ (ದಧ್ಯಕ್ತ ಲಾಜಾನ್ವಾ) ಪ್ರಕ್ಷಿಪ್ಯ।

ನವಜಲಪೂರ್ಣಕಲಶಂ ಶುಕ್ಲೈಕ ಪುಷ್ಪಯುತಂ ಗಂಧಾದಿಭಿರರ್ಚಿತಂ ಹಸ್ತ ದ್ವಯೇನಾದಾಯ। ಜಾನುಭ್ಯಾಮವನಿಂ ಗತ್ವಾ। ಓಂ ನಮೋ ವರುಣಾಯೇತಿ

